# ಮಾನಸಿ

ತಿಂಗಳ ಪತ್ರಿಕೆ

ಏಪ್ರಿಲ್ 1993

# ಮಾನಸ

ತಿಂಗಳ ಪತ್ರಿಕೆ

ಸಂಪುಟ : ೧೩ ಸಂಚಿಕೆ : ೩

ಏಪ್ರಿಲ್ - ೧೯೯೩

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

**ವಿಳಾಸ :**

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು-560 067

**ಸಂಪರ್ಕ ವಿಳಾಸ**

ನಂ-457. 12ನೇ ಅಡ್ಡರಸ್ತೆ
ಪಶ್ಚಿಮ ಕಾರ್ಡ್‌ರಸ್ತೆ, 2ನೆ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು-560 086

ಬಿಡಿ ಪ್ರತಿ : **3-00 ರೂ.**

ಸೂಚನೆ : ವಾರ್ಷಿಕ ಚಂದಾ : **25 ರೂ.**

ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.

ಬ್ಯಾಂಕ್ ಡ್ರಾಫ್ಟ್, ಎಂ.ಓ. ಗಳನ್ನು ಸಂಪರ್ಕ
ವಿಳಾಸಕ್ಕೆ ಕಳಿಸಿಕೊಡಬೇಕಾಗಿ ಕೋರಿದೆ.


**ಈ ಸಂಚಿಕೆಯಲ್ಲಿ...**



ಈ ಸಂಚಿಕೆಯನ್ನು ಸಂಪಾದಿಸಿದವರು
ಉತ್ತನೂರ ರಾಜಮ್ಮ ವಿ.ಶೆಟ್ಟಿ


ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು-೫೬೦ ೦೬೭



## ಸಂಪಾದಕೀಯ

ನನಗನಿಸಿದ ಮಟ್ಟಿಗೆ ಯಾವುದೆ ಸಭೆ, ಪ್ರಗತಿಪರತೆಯ ಚರ್ಚೆ ಗೋಷ್ಠಿ, ವಿಚಾರಸಂಕಿರಣಗಳಿಗೆ ನಿಜವಾದ ಅರ್ಥ ಸಿಗಬೇಕಾದರೆ ಎಷ್ಟೋ ಸಂಖ್ಯೆಯ ಹುಣಸನಕೋಟೆ ಅನಸೂಯಮ್ಮರು, ಕುಷ್ಠಗಿಯ ಶರಣವ್ವರು, ಕುದುರೆ ಮೋತಿಯ ಬತ್ತಲೆ ಹೆಣ್ಣುಗಳು ಕುಮುಲುತ್ತಿರುವ ನೆಲೆಗಳಾದ. ಹಳ್ಳಿಗಾಡಿನ ಹೊಲಗೇರಿಯ ಅಟ್ಟಿಗಳ ಅಂಗಳ, ಹೊಲಗಳ ಬದುವಿನ ಬೀಡು, ತನ್ನಂತಾನೆ ಹರಿವ ಕಾನೆ ತೆಕ್ಕೆಯ ಕಾಲುವೆಗಡ್ಡೆ ಕಾಳು ಒಟ್ಟುವ ಕಣದ ಗರ್ಭಾಂಗಣ.

ಇವುಗಳ ಮಧ್ಯೆ ಕುಳಿತು ಅಲ್ಲಿಯ ಅಕ್ಕತಂಗೇರ ಒಡಲೊಳಗೆ ಅಡಗಿರುವ ಏನೆಲ್ಲಾ ಕಹಿಸಿಹಿ ಸರಕನ್ನು ಮುಟ್ಟಿ ವ್ಯವಹರಿಸೋಣ. ಕುಗ್ರಾಮಗಳ ಓಣಿಗಳಲ್ಲಿ ಕೊರಕಲು ಹಾದಿಗಳಲ್ಲಿ ಮಿಣುಗುಟ್ಟುವ ಬುಡ್ಡಿದೀಪದ ಮುರಕಲು ಗುಡಿಲುಗಳಲ್ಲಿ ಬಂದಳಿಕೆಯಂತೆ ಅಂಟಿಕೊಂಡೇ ಬೆಳೆದು ಬಂದಿರುವ ಮೌಢ್ಯದ ಜಡ್ಡು, ಅನಕ್ಷರಸ್ತತೆಯ ಮಬ್ಬಿಗೆ ಬೆಳಕಾಡಿಸಿ ಅಲ್ಲಿ ಸುಯ್ಯುತ್ತಿರುವ ನೋವಿನ ಅಂತರಂಗಕ್ಕೆ ಸಾದ್ಯವಾದಷ್ಟೂ ತಂಪೆರೆಯೋಣ.

ಬನ್ನಿ ಗೆಳತಿಯರೇ...
ಎಡುವೃತ್ತಲೆ ನಡುಕಟ್ಟಿ
ಬುರಜಿಗದ್ದೆಯ ಕಸಕುಪ್ಪೆಯನ್ನು
ಆಳದ ನೆಲಕ್ಕೆ ತುಳಿದು
ಹಸಿರು ಬಿಗಿಸೋಣ
ಗಟ್ಟಿ ಬೆಳೆಯಾಗಿ ಕಾನಿಗೆ ಹಬ್ಬೋಣ

# ಮಹಿಳೆ ಮತ್ತು ವೈಚಾರಿಕತೆ

— ಉತ್ತನೂರು ರಾಜಮ್ಮ ವಿ. ಶೆಟ್ಟಿ

ಹೆಣ್ಣಿನ ವೈಚಾರಿಕತೆಯ ನಿಜವಾದ ಅರ್ಥವನ್ನು ಈ ರೀತಿ ವಿಶ್ಲೇಷಿಸಬಹುದು ತನ್ನನ್ನು ತಾನು ಅರಿತುಕೊಳ್ಳುವುದು. ಅರಿತುಕೊಳ್ಳುವುದರ ಮೂಲಕ ತಾನು ಏನು, ಹೇಗೆ ಎನ್ನುವ ಸ್ವಂತಿಕೆ ಬೆಳಸಿಕೊಳ್ಳುವುದು. ಅದರ ಮೂಲಕವೇ ಸ್ವಾಭಿಮಾನ, ಸ್ವಾವಲಂಬನೆಯ ತಿಳಿವು ಸಹ ಒಡಮೂಡಿ ಬರುತ್ತದೆ.

ಮಹಿಳೆಯರಲ್ಲಿ ಇಂತಹ ಬೆಳವಣಿಗೆಯ ಸಾಧ್ಯಾ ಸಾಧ್ಯತೆಗಳ ಕುರಿತಂತೆ ವಿಚಾರಿಸಿಕೊಳ್ಳುವಾಗ, ಭಾರತೀಯ ಸಮಾಜಗಳ, ಎಂಭತ್ತೈದು ಭಾಗದ ಗ್ರಾಮೀಣ ಪರಿಸರದ ಹಳ್ಳಿಗಾಡು ಹೆಣ್ಣುಮಕ್ಕಳ ಪರಿಸ್ಥಿತಿ ಸಂದರ್ಭಗಳನ್ನು ನಾವು ಮುಖ್ಯವಾಗಿ ಯೋಚನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಯೋಚಿಸುವಾಗ ಒಂದು ರೀತಿಯ ಕಳವಳವೂ ಸಹ ಉಂಟಾಗುತ್ತದೆ. ಒಂದು ಹಳ್ಳಿ ಅಥವಾ ಒಂದು ಊರನ್ನು ಗಮನಿಸೋಣ, ಅಲ್ಲಿನ ಗಂಡು ಹೆಣ್ಣುಗಳ ಜನಸಂಖ್ಯೆ ಸಮ ಸಮವೇ ಆದರೂ, ದುಡಿಮೆಯ ವಿಷಯದಲ್ಲಿ ಮಾತ್ರ ಹೆಣ್ಣಿನದೇ ಅಧಿಕ ಪಾತ್ರ. ಹೊಲ, ಗದ್ದೆ, ತೋಟ ತಡಿಕೆ ಕೆಲಸದಲ್ಲಿ ಎತ್ತು, ಗಾಡಿ ನೇಗಿಲೂಡುವ ಹಂತ ಬಿಟ್ಟರೆ, ಬೆಳೆಯು ಮೊಳಕೆಯೊಡದಾಗಿನಿಂದ, ಕಳೆ ತೆಗೆದು ಕಾವಲು, ಕೊಯ್ಲು, ಕಾಳು ಒಟ್ಟುವುದು ಹಸನು ಮಾಡಿ ಹಗೇವಿಗೆ ಸುರಿಯುವವರೆಗೆ ಆಕೆಯದೆ ಕೈ ದುಡಿಮೆಯಲ್ಲವೇ ? ಊರ ಸುತ್ತಲ ಹಸಿರು ಕೃಷಿಯ ಎಲ್ಲಾ ದುಡಿಮೆಯ ಹಿಂದಿನ ಎಲ್ಲಾ ಭಾದ್ಯತೆಯೂ ಸ್ತ್ರೀಯರದೇ ಆಗಿರುತ್ತೆ. ಆದರೆ ಫಲಾಫಲಗಳ ಯಜಮಾನಿಕೆ ಅದನ್ನು ಅನುಭವಿಸುವ ಹಕ್ಕುಗಳು ಪ್ರಧಾನವಾಗಿ ಗಂಡಿನ ಕೈಯಲ್ಲಿಯೇ ಅಡಗಿರುತ್ತದೆ. ಇಡೀ ಭಾರತದ ಹಳ್ಳಿಗಳ ಮುಖವಾಗಿ ನಮಗೆ ಕಂಡುಬರುವುದರ ಒಂದು ನೋಟ, ಬೆಳಗು ಮುಂಜಾನೆಯಿಂದ ಸಂಜೆ ಕತ್ತಲಾಗುವ ವರೆಗೆ ಊರ ಒಳಗೆ ಊರ ಹೊರಗೆ ಹೊಲ ಗದ್ದೆಗಳ ಕೃಷಿ ಕೆಲಸಗಳಲ್ಲಿ ಹೆಣ್ಣುಮಕ್ಕಳ ಕೈಗಳೇ ಹರಡಿಕೊಂಡಿರುವುದು ಸಾಮಾನ್ಯ ದೃಶ್ಯ. ಇತ್ತೀಚಿನ ಬದಲಾವಣೆಗಳಂತೂ, ಗಂಡಿನ ವಿಚಾರ ಲಹರಿಗಳು ತೊಡಗಿಕೊಳ್ಳುವಂಥ ರೀತಿ ಹೀಗೆ. ಬೆಳಗಾದರೆ ಅಚ್ಚುಕಟ್ಟಾದ ಉಡುಪು. ಗಡ್ಡದ ನುಣುಪಿನೊಂದಿಗೆ ನಿರಾಳವಾಗಿ ಓಡಾಡುವ ಬಸ್ಸು ಪ್ರಯಾಣಗಳಲ್ಲಿ, ಹತ್ತಿರದ ಪಟ್ಟಣಗಳ ರಂಗಿನ ರಾಜಕೀಯ, ಸಿನಿಮಾ ವಿಡಿಯೋಗಳ ಆಕರ್ಷಕ ಮಾಧ್ಯಮಗಳ ರಂಜನೆಯ ಹವ್ಯಾಸಗಳು. ಇವೆಲ್ಲವುಗಳಲ್ಲಿ ಹೆಚ್ಚಿನ ಪರಿಣಾಮ ಕಂಡುಬರುವುದು ಗಂಡಸಿನ ಮೋಜುವಾನಿಯ ಎದುರಿಲ್ಲದ, ವಿಜೃಂಭಿಕೆ ತಾನೆ ?

ಗಂಡಸಿನ ಮೈಗಳ್ಳತನ ಈ ರೀತಿಯಿಂದಲೂ ಹೆಚ್ಚಾಗುತ್ತಲೇ ಸ್ತ್ರೀಯರನ್ನು ಇನ್ನೂ ಹೆಚ್ಚಿನ ದುಡಿಮೆಗೆ ಹಚ್ಚುತ್ತವೆಯೇ ವಿನಃ ಅವಳಲ್ಲಿ ಎಡಬಿಡದ ರೋಟಿನ (ದುಡಿಮೆ) ಫಲವಾಗಿ ದೇಹವನ್ನು, ಶಕ್ತಿಯನ್ನು ಸವೆಸುವುದಷ್ಟೆ ಹೊರತು, ಇನ್ನಾವ ರೀತಿಯ ವಿರಾಮದ ಯೋಚನೆ, ಅಕ್ಷರವಂತಿಕೆ, ಚಿಂತನೆಯ ಕಸಿ ಮಾಡಲು ಸಾಧ್ಯವಾಗುತ್ತದೆ?

ಮಹಿಳೆಯರಲ್ಲಿ ತನ್ನದೇ ಸ್ವಂತಿಕೆ, ಸ್ವಾತಂತ್ರ ಎಷ್ಟು ಮಟ್ಟಿನದು ಎನ್ನುವ ವಿಚಾರಕ್ಕೆ ಇನ್ನೊಂದು ಮುಖ ಗಮನಿಸಿದಾಗ ರಾಜಕೀಯ ಹಿನ್ನೆಲೆಗಳಲ್ಲಿ ಹೆಸರಿಗೆ ಮಹಿಳಾ ಪ್ರಾತಿನಿಧ್ಯತೆಯ ಅಂಗವಾಗಿ, ಪಂಚಾಯಿತಿ, ಮಂಡಲ ಜಿಲ್ಲಾ ರಂಗಗಳಲ್ಲಿ ಮಹಿಳಾ ಸದಸ್ಯರುಗಳ ಸಂಖ್ಯೆ ಗಮನ ಸೆಳೆಯಬಲ್ಲುದಾದರೂ ಕೇವಲ ನಾಮಕಾವಾಸ್ತೆ. ಹೆಣ್ಣುಮಕ್ಕಳ ಹೆಸರುಗಳು ಸ್ಥಳ ಗಿಟ್ಟಿಸಿಕೊಳ್ಳುತ್ತವೆಯಲ್ಲದೆ ಆ ಸದಸ್ಯತ್ವಗಳ ಎಲ್ಲಾ ಮೇಲ್ವಿಚಾರಣೆ ಸೂತ್ರ, ತೀರ್ಮಾನ ಆಕೆಯ ಹಿನ್ನೆಲೆಯಲ್ಲಿ ಮುಚ್ಚಿ ತೋರುವ ಗಂಡಿನ ಆರ್ಭಟವೇ ಒತ್ತು ಕಾಣಿಸುವುದು. ಹೇಗೆಯೇ ಆದರೂ,

ಎರಡನೆಯ ಸ್ಥಾನದಿಂದ ಮೇಲೇರಿಸದ ಪುರುಷಪ್ರಧಾನ ಸಮುದಾಯ ಕುರಿಹಿಂಡಿಗೆ ಕಾವಲಿಟ್ಟ ತೋಳನ ತೆರದಿ ಮಹಿಳೆಯ ವಿಚಾರಶಕ್ತಿ ಬೆಳೆಯದಿರಲು ನಾಲಗೆ ಚಾಚಿ ತನ್ನ ಕಾವಲನ್ನು ಸೂಚಿಸುತ್ತದೆ.

ಹೀಗೆ ಗ್ರಾಮೀಣ ಪರಿಸರದ ಹೆಣ್ಣು ಮೌಢ್ಯ, ಮುಗ್ಧತೆ, ಅನಕ್ಷರತೆಯ ವಲಯದಲ್ಲೇ ಗಿರಕಿ ಹೊಡೆಯಬೇಕಾಗುತ್ತದೆ.

ಹಾಗೆಯೇ ಪೇಟೆ ಪರಿಸರದ ಸ್ಥಳಗಳಲ್ಲಿನ ಕೂಲಿನಾಲಿ ಮಾಡುವ ಕೆಳವರ್ಗಗಳ ಹೆಣ್ಣುಗಳ ಸ್ಥಿತಿಯಂತೂ ತೀರ ಕಷ್ಟಕರವಾದದ್ದು- ಕಲ್ಲು, ಮಣ್ಣು, ಗಾರೆ, ಕೆಲಸಗಳಲ್ಲಿ ಬಂಗಲೆ, ಕಾಲುವೆ, ಅಣೆಕಟ್ಟುಗಳ ಶ್ರಮದಾಯಕ ಹಂತಗಳಲ್ಲಂತೂ, ಅವಳ ದುಡಿಮೆಗೆ, ದೈಹಿಕ ಶ್ರಮಕ್ಕೆ ಗಂಡಿಗೆ ಸಮನಾದ ಪ್ರತಿಫಲ ಸಿಕ್ಕುವುದೇ ಇಲ್ಲ. ನೀವು ಒಂದು ಮನೆಕಟ್ಟುವ ಕೆಲಸ ನಡೆಯುವ ಸ್ಥಳ ಗಮನಿಸಿ ನೋಡಿ, ಎಷ್ಟೇ ಶ್ರಮದಾಯಕ ಕೆಲಸ ನಿರ್ವಹಿಸುವ ಹೆಣ್ಣು, ಸಣ್ಣ ಹುಡುಗನಾದರೂ ಗಂಡು ಎನಿಸಿಕೊಂಡವನ ಕೂಲಿಯಲ್ಲಿ ಅರ್ಧಭಾಗವೇ ಆಕೆಗೆ ದೊರಕುವುದು ಸಾಧ್ಯ. ಗಂಡು ಮೇಸ್ತ್ರಿಯ ಸಮ ಸಮಕ್ಕೆ ಸಿಮೆಂಟು ಗಾರೆ ಕಲಿಸಿ ಮೆತ್ತುವ ಮುನೆಮ್ಮನನ್ನು ಯಾಕೆ ಮುನೆಮ್ಮ ನೀನು ಮೇಸ್ತ್ರಿ ಅಥವಾ ಸಿಮೆಂಟು ಕಲಸುವ ಎಂಗಟಪ್ಪನಿಗಿಂತ ಕಡಿಮೆಯಿಲ್ಲದೆ ಕೆಲಸ ಮಾಡಿದರೂ ಸಹ ಆತನಿಗೆ 60 ನಿನಗೆ 20 ಮಾತ್ರ ಕೊಡ್ತಾರೇಕೆ? ಎಂದು ಕೇಳಿದಾಗ ಯಕ್ಕಾ ಅವ್ನು ಗಂಡು ಅನಿಸ್ಕಂಡ ನಾನು ಹೆಣ್ಣು ಅನ್ನಿಸ್ಕಂಡೆ ಅದೇ ಅಲ್ವಾ ಎಚ್ಚು ಕಡಿಮೆ ಅಂತಾಳೆ. ಹೆಂಗ್ಸು ಯಾವತ್ತಿಗೂ ಕಡಿಮೆಯೇ ಎನ್ನುವ ವ್ಯವಸ್ಥೆಯ ಸಿದ್ಧಾಂತ ಅವಳ ಮಟ್ಟಿಗೆ ಮೀರಲಾಗದ ಕಟ್ಟು. ಇಂತ ಬೇರುಗಳು ಸಡಿಲಾಗಿ ನನಗೂ ಗಂಡಿಗೆ ಸಮನಾಗುವ ಎಲ್ಲಾ ಗುಣಗಳಿವೆ ಎಂದು ತಿಳಿಯುವುದು ಎಂದು? ಹೇಗೆ ?

ಮೇಲಿನದು ಆರ್ಥಿಕ ಹಿನ್ನೆಲೆಯ ಅರಿವಿನ ಮುಖವಾದರೆ, ಇನ್ನು ಸಾಮಾಜಿಕ ಸ್ಥಾನಮಾನಗಳನ್ನು ಅವಲೋಕಿಸಿದಾಗ ಕೆಲವು ಹಂತಗಳು, ಕೆಲವು ವರ್ಗಗಳು ಹೆಣ್ಣಿನ ಬಗ್ಗೆ ಭಿನ್ನ ಭಿನ್ನ ಅವಸ್ಥೆಗಳನ್ನು ಅಭಿಪ್ರಾಯಿಸಿವೆ.

ಹೆಣ್ಣನ್ನು ದೇವತೆ, ಶ್ರೇಷ್ಠತೆಗಳಲ್ಲಿ ವಿಜೃಂಭಿಸಿದ ಮೇಲ್ವರ್ಗದ ಘನ (?) ಸಂಸ್ಕೃತಿ ಹೆಣ್ಣಿನ ವಿಚಾರ ಶಕ್ತಿಯನ್ನು ಜಡವಾಗಿಸಿತೇ, ತೊತ್ತಾಗಿಸಿತೇ ಹೊರತು ಎಲ್ಲೆಗಳನ್ನು ಹರಿದುಕೊಳ್ಳಲು ಸಹಕರಿಸಲಿಲ್ಲ. ತರ್ಕಕ್ಕೆ ಸರಿಯಾಗುವ ಗ್ರಾಂಥಿಕ ಪಾಂಡಿತ್ಯದಲ್ಲಿ ಕೆಲವಾರು ಪಂಡಿತ ವಾಖ್ಯೆಗಳಲ್ಲಿ ವೇದ, ಉಪನಿಷತ್ತುಗಳ, ಶಾಸ್ತ್ರಗಳ ಧಾರೆಯನ್ನು ಹರಿಸಿ, ಗಾರ್ಗಿ, ಮೈತ್ರೇಯಿಯರನ್ನು ದಾಖಲಿಸುವ ವಿದ್ವತ್ತಿನ ಜನ, ಅದೇ ಮೇಲ್ವರ್ಗದ ಸ್ತ್ರೀಯರ ಕುರಿತಂತೆ ಕುಳಿತರೆ, ಎದ್ದರೆ, ಲಕ್ಷ್ಮಣ ರೇಖೆಗಳನ್ನು ಎಳೆದು ಬಂಧಿಸಿತಲ್ಲದೆ ತನ್ನ ಹಿನ್ನೆಲೆಯ ಯಾವುದೇ ಪೀಳಿಗೆಯಲ್ಲಾಗಲಿ, ಯಾವ ಪರಂಪರೆಯಲ್ಲೇ ಆಗಲಿ ಪ್ರಾಮಾಣಿಕವಾಗಿ ಹೆಣ್ಣಿನ ಮಾನವೀಯ ಸ್ಪಂದನಕ್ಕೆ ನಿಜವಾದ ಬೆಲೆ ಕೊಟ್ಟದ್ದು ಉಂಟೆ ? ಆಕೆಗೆ ತನ್ನ ಮನಸ್ಸನ್ನು ವಿಚಾರಿಸಿಕೊಳ್ಳುವಷ್ಟು ಮುಕ್ತ ಲವಲವಿಕೆ ಇದ್ದದ್ದೇ ಆದರೆ, ಇಂದಿನ ಸಂದರ್ಭಕ್ಕೆ ಮಹಿಳೆ ಮತ್ತು ವೈಚಾರಿಕತೆ ಒಂದು ಗಹನದ ವಸ್ತು ಅಥವಾ ವಿಷಯವೆಂದು ಒತ್ತು ಕೊಡುವ ಪ್ರಶ್ನೆಯೇ ಏಳುತ್ತಿದ್ದಿಲ್ಲವೇನೋ ?

ಮಧ್ಯಮ ವರ್ಗಗಳ ಜನಸಾಮಾನ್ಯ ಬದುಕಿನ ಸರಳ ಪರಂಪರೆಗಳಲ್ಲಿ ಅವುಗಳ ನಂಬುಗೆಗಳಲ್ಲಿ ತಮ್ಮ ಸಾಧಾರಣ ವಿದ್ಯೆ, ತಿಳಿವಳಿಕೆಯಿರುವ ಬಹುಪಾಲು ಸಮುದಾಯಗಳಲ್ಲಿ ಇಂದಿನ ಸಂದರ್ಭಗಳಲ್ಲಿ ಸಹ ಮೇಲ್ವರ್ಗದ ಒಣ ಗಾಂಭೀರ್ಯದ ಕಟ್ಟುಪಾಡುಗಳು ತಮ್ಮ ಛಾಪು ಬೀರಿ, ಹೆಣ್ಣಿನ ಸ್ವಂತಿಕೆ, ವಿಚಾರ ಶೀಲತೆಗಳನ್ನು ದಿಕ್ಕು ತಪ್ಪುವಂತೆ ಮಾಡುತ್ತವೆ. ಇಂತಹ ಸಂದರ್ಭಗಳನ್ನು ಗಮನಿಸುವಾಗ ಇದೊಂದು ರೀತಿ ತಂತ್ರ ಸುಳಿಯಲ್ಲಿನ ವಿಪರ್ಯಾಸ ಅನ್ನಿಸುತ್ತದೆ.

ಬಾಲ್ಯದಲ್ಲಿ ತಂದೆ, ಯೌವನದಲ್ಲಿ ಗಂಡ, ವೃದ್ಧಾಪ್ಯದಲ್ಲಿ ಹೆತ್ತಮಕ್ಕಳ ರಕ್ಷಣೆಯ ಎಲ್ಲೆಯೊಳಗೇ ತನ್ನ ಬದುಕಿನ ಪೂರ್ಣತೆ, ಸಾರ್ಥಕತೆ ಕಂಡುಕೊಳ್ಳಬೇಕೆಂದು ಶಾಸಿಸಿ ಹೋದ, ಭಾರತೀಯ ಸಮಾಜದ ಹೆಣ್ಣು ಕುಲದ ದುಸ್ವಪ್ನವೆನಿಸಿದ 'ಮನು' ಮಹಾಶಯನ ಜೀವ ವಿರೋಧಿ 'ವಿಧಿ'ಗಳನ್ನು ಸ್ವಲ್ಪ ಮಟ್ಟಿಗಾದರೂ ಗಣಿಸದೆ ತಮ್ಮ ಸ್ವಂತ ಇಚ್ಛೆ ಸಡಿಲಾದ ಜೀವನ ಕ್ರಮಗಳಿಂದ ಹೆಣ್ಣಿನ ತಪ್ಪು ಒಪ್ಪುಗಳ ಬದುಕಿಗೆ ರಾಜೀ ಮನೋಭಾವವನ್ನು ನಿರ್ಮಿಸಿಕೊಟ್ಟದ್ದು ಕೆಳವರ್ಗದ, ಜನಪದರ ಸಮುದಾಯ ಹಾಗು ಅವರ ಮಾನವೀಯವೆನಿಸುವ ಮುಗ್ಧ ನಡಾವಳಿಗಳು.

ಅಂತಹ ನೀತಿಗೆ ನಿದರ್ಶನವೆಂದರೆ, ಆದಿಯಿಂದ ಬಾಲ

ವಿಧವೆಯರನ್ನು, ಮಾನವ ಸಹಜ ವಾಂಛೆ, ಆಕಾಂಕ್ಷೆಗಳಿಗೂ ಎರವಾಗಿಸಿ, ಪ್ರಕೃತಿ ಸಹಜ ಕ್ರಿಯೆಗಳಿಗೂ ಅಡ್ಡ ಗೋಡೆಗಳನ್ನು ನಾಟಿ ಮೈಲಿಗೆಯ ವಸ್ತುವಾಗಿ ಮೂಲೆಗುಂಪಾಗಿಸಿದ ಮನು ಧರ್ಮರಾಯನ ವಿಧಿಗಳನ್ನು ಮೆರಿಸಿಪಾಲಿಸಿದ ಮೇಲ್ವರ್ಗದ ಪೀಳಿಗೆಗಿಂತ ಭಿನ್ನವಾಗಿ ಯೋಚಿಸದ್ದು ಸಹಜತೆಗೆ ಹತ್ತಿರವಾಗಿ ನಡೆದುಕೊಂಡದ್ದು ಅನಕ್ಷರಸ್ತ,

ಇದನ್ನೆಲ್ಲಾ ಗಮನಿಸಿದಾಗ ಮಹಿಳೆಯರ, ತಿಳಿವಿನ ಪ್ರಜ್ಞೆಗಳಲ್ಲಿ ಹಿಂದಿನ ಎಷ್ಟೋ ಸ್ಥಿತ್ಯಂತರಗಳು ವ್ಯವಸ್ಥೆಯ ಹಂತಗಳು ಒಂದು ಖಚಿತ ಸ್ವಂತಿಕೆಯನ್ನು ತಲುಪದೆ ಮೌಢ್ಯದಲ್ಲಿ ತೊಳಲಾಡುತ್ತಿರುವ ಸಂದರ್ಭಕ್ಕೆ ಹೆಣ್ಣು ಕುಲದ ನಿಜವಾದ ಹಿತಪಕ್ಷವಾಗಿ, ಎಲ್ಲ ಮೂಲೆಗಳ, ಎಲ್ಲ ವರ್ಗಗಳಲ್ಲಿ ಸಾಮಾಜಿಕ ಬದಲಾವಣೆಯ ದಾರಿಯಲ್ಲಿ ಜನಪರವಾಗಿ, ಸ್ತ್ರೀಯರ ವಿಚಾರ ಶಕ್ತಿ ಉದ್ದೀಪನಗೊಂಡಿದ್ದು ಹನ್ನೆರಡನೆಯ ಶತಮಾನದ ವಚನ ಸಂದರ್ಭ ಎನ್ನುವುದು ಮತ್ತು ಆ ಯೋಚನಾರಶ್ಮಿ ನಮ್ಮ ಕರ್ನಾಟಕ ಪರಿಸರದ ಬೆಳಕಾಗಿ ಮೊಳಕೆಯೊಡೆದದ್ದು ಎನ್ನುವುದು ಅತಿ ಹೆಚ್ಚಿನ ಗರ್ವದ ವಿಷಯ.

ಮುಗ್ಧ ಮೌಢ್ಯದ ಕೆಳವರ್ಗದ ಜನ. ಎಳೆ ವಿಧವೆಯರಿಗಷ್ಟೆ ಅಲ್ಲ, ಗಂಡ ಸತ್ತು ಪ್ರಾಯದಲ್ಲಿರುವಂತ ಹೆಣ್ಣುಗಳಿಗೆ ಮರು ಮದುವೆ (ಕೂಡಿಕೆ, ಕಟ್ಟುಬಿಡಿ, ಕೂಡಾವಳಿ)ಗಳಿಗೆ ತಮ್ಮ ಸಾಮಾಜಿಕ ಒಪ್ಪಿಗೆ ನೀಡುವದರ ಮೂಲಕ ತಲೆವಾಸಿವ ಯುವತಿಯರು, ಕಲೆತು ಬಾಳುವುದಕ್ಕೆ ಸಹಕರಿಸುತ್ತ ಬಂದಿರುವುದನ್ನು ಎಲ್ಲಾ ಕಾಲಕ್ಕೂ ಕಾಣಬಹುದಾಗಿದೆ.

ಇಂತ ಸರಳ ಸಹಜ ಮಾನವೀಯ ಕಾಳಜಿ ಮತ್ತು ರೂಢಿಗಳನ್ನು ಚಾಲ್ತಿಗೆ ತರುವ ಪ್ರಯತ್ನಗಳಿಗೂ ಸಹ (ಸಹಗಮನ ಪದ್ಧತಿ, ವಿಧವಾವಿವಾಹ) ರಾಜಾರಾಂ ಮೋಹನರಾಯ್ ರಂಥಹ ವಿದ್ವಾಂಸರು ಸಾಮಾಜಿಕ ಶಾಸ್ತ್ರಜ್ಞರು ಅಗಾಧ ಅಧ್ಯಯನ, ಸಿದ್ಧಾಂತ ರೂಪಿಸುವ ಚಳುವಳಿಯೋಪಾದಿಯಲ್ಲಿ ಹೋರಾಟವೇ ಮಾಡಬೇಕಾಯಿತು.

ಮೇಲ್ವರ್ಗ ಕೆಳವರ್ಗಗಳ ಭಿನ್ನ ದೃಷ್ಟಿಕೋನಗಳಲ್ಲಿ, ಹೆಣ್ಣಿನ ಉಸಿರು ಕಟ್ಟಿಸಿದ ಉಚ್ಚಕುಲದ ಸಾಂಪ್ರದಾಯಿಕತೆಗಿಂತಲೂ ಹಗುರವಾಗಿ ಉಸಿರಾಡಲು ಅನುವು ಮಾಡಿಕೊಟ್ಟ ಕೆಳವರ್ಗದ ಹೆಣ್ಣುಮಕ್ಕಳು, ಓಬಿ ಓಬಕ್ಕನ ಕಾಲದಿಂದಲೂ ತನಗಿಷ್ಟ ಬಂದ ಗಂಡೊಡನೆ ಓಡಿಹೋಗಿಯಾದರೂ ಮದುವೆಮಾಡಿಕೊಳ್ಳುತ್ತಿದ್ದ, ಮತ್ತೆ ತನ್ನ ಸಮುದಾಯದೊಂದಿಗೆ ಬೆರೆತು ಒಂದಾಗುತ್ತಿದ್ದ ರೀತಿಯಲ್ಲಿ ಅವಳಲ್ಲಿ ಸ್ವಲ್ಪವಾದರೂ, ಸ್ವಾತಂತ್ರ್ಯ ಸ್ವ ಇಚ್ಛೆಯ ಶಕ್ತಿ ಪಡೆದುಕೊಂಡಿದ್ದಳು ಎನ್ನುವುದು ಅತ್ಯಂತ ಸಮಾಧಾನ ಕೊಡುವ ಅಂಶ.

ಇದನ್ನೆಲ್ಲಾ ಗಮನಿಸಿದಾಗ ಮಹಿಳೆಯರ, ತಿಳಿವಿನ ಪ್ರಜ್ಞೆಗಳಲ್ಲಿ ಹಿಂದಿನ ಎಷ್ಟೋ ಸ್ಥಿತ್ಯಂತರಗಳು ವ್ಯವಸ್ಥೆಯ ಹಂತಗಳು ಒಂದು ಖಚಿತ ಸ್ವಂತಿಕೆಯನ್ನು ತಲುಪದೆ ಮೌಢ್ಯದಲ್ಲಿ ತೊಳಲಾಡುತ್ತಿರುವ ಸಂದರ್ಭಕ್ಕೆ ಹೆಣ್ಣು ಕುಲದ ನಿಜವಾದ ಹಿತಪಕ್ಷವಾಗಿ, ಎಲ್ಲ ಮೂಲೆಗಳ, ಎಲ್ಲ ವರ್ಗಗಳಲ್ಲಿ ಸಾಮಾಜಿಕ ಬದಲಾವಣೆಯ ದಾರಿಯಲ್ಲಿ ಜನಪರವಾಗಿ, ಸ್ತ್ರೀಯರ ವಿಚಾರ ಶಕ್ತಿ ಉದ್ದೀಪನಗೊಂಡಿದ್ದು ಹನ್ನೆರಡನೆಯ ಶತಮಾನದ ವಚನ ಸಂಧರ್ಭ ಎನ್ನುವುದು ಮತ್ತು ಆ ಯೋಚನಾರಶ್ಮಿ ನಮ್ಮ ಕರ್ನಾಟಕ ಪರಿಸರದ ಬೆಳಕಾಗಿ ಮೊಳಕೆಯೊಡದದ್ದು ಎನ್ನುವುದು ಅತಿ ಹೆಚ್ಚಿನ ಗರ್ವದ ವಿಷಯ.

"ಎಲ್ಲ ಎಲ್ಲವನರಿದು ಫಲವೇನಯ್ಯ, ತನ್ನ ತಾನರಿಯಬೇಕಲ್ಲದೆ ?"

"ತನ್ನಲ್ಲಿದ್ದುದು ತಾನರಿಯದನ್ನಕ್ಕ ಹೇಳಿದೊಡೇನು ? ಕೇಳಿದೊಡೇನು ?

"ಅಪಾರ ಮಹಿಮೆ ಚೆನ್ನಮಲ್ಲಿಕಾರ್ಜುನ"

(ಅಕ್ಕಮಹಾದೇವಿ ವಚನ

ಎನ್ನುವ "ಅಕ್ಕಮಹಾದೇವಿ"ಯ ಮುಗಿಲೆತ್ತರದ ಮನಃ ಶಕ್ತಿ ಸ್ತ್ರೀ ಪೀಳಿಗೆಯ ಪ್ರಜ್ಞಾ ಪ್ರತಿಮೆಯ ಸಂಕೇತವಾಗಿ, ದ್ರವರೂಪದ ವಚನ ಮಾರ್ಗದಲ್ಲಿ ಇಡೀ ಸಮುದಾಯದ ಮನಸುಗಳನ್ನು ಮುಟ್ಟುವಂತೆ ಮಾಡಿತು. ಮಾನವ ಕುಲದ ಹಿರಿಯಣ್ಣ ಬಸವಣ್ಣನವರ "ಅನುಭವ ಮಂಟಪದ" ದ್ವಾರದಲ್ಲಿ ಹೆಣ್ಣು ಗಂಡೆಂಬ ಭೇದವಿಲ್ಲದೆ, ಅರಸು, ಆಳು, ಜಾತಿ, ವರ್ಗ, ಕಳ್ಳ, ಸೂಳೆಯರೆನ್ನದೆ, ಪಾಪ-ಪುಣ್ಯಗಳ ಎಲ್ಲ ಹಿನ್ನೆಲೆಯಲ್ಲಿನ ಕುಲುಮೆಯೊಳಗಿಂದ ತೆಗೆದ ಬಂಗಾರದಂತೆ, ಎಲ್ಲ ಮನುಷ್ಯರನ್ನು ಬದಲಾವಣೆಯ ದಡಕ್ಕೆ ಎತ್ತಿ ನಿಲ್ಲಿಸಿದವು.

ಮಡದಿಯೆನಲಾಗದು ಬಸವಂಗೆ ಎನ್ನನು
ಪುರುಷನೆನಲಾಗದು ಬಸವ ನೆನಗೆ
ಉಭಯದ ಕುಲವ ಹರಿದು ಬಸವಗೆ ಶಿಶುವಾದೆ
ಬಸವನೆನ್ನ ಶಿಶುವಾದ (ಶಿ. ಶಿವ)

ಒಸವಣ್ಣನ ಸತಿ ನೀಲಲೋಚನೆಯು ಮೇಲಿನ ವಚನದಲ್ಲಿ, ಗಂಡ ಹೆಂಡಿರ ಸಂಬಂಧದಲ್ಲಿ ಕಾಮ,ಪ್ರೇಮವಷ್ಟೇ ಮುಖ್ಯವಲ್ಲ. ಮಗುವಂತೆ ಪಾಲಿಸಿಕೊಳ್ಳುವ ನಿಷ್ಕಪಟವಾಗಿ ಶುದ್ಧ ವಾತ್ಸಲ್ಯದಿಂದ ಲಾಲಿಸಿಕೊಳ್ಳುವ ಸಾಮರಸ್ಯತೆಯು ಒಮ್ಮತವನ್ನು ನಿಲ್ಲಿಸಿ ಮನಗಾಣಿಸುತ್ತದೆ.

ಹೆಣ್ಣಿನ ವಿಚಾರಶಕ್ತಿಯು ಮೊನಚು ಶಿವಶರಣೆಯರ ವಚನಗಳಲ್ಲಿ ಶಕ್ತಿಯುತವಾಗಿ ಕಂಡುಬರುವ ಕಾರಣವೆಂದರೆ, ವಚನ ಸಂದರ್ಭ ಶೋಷಿತ ಜನಾಂಗಗಳ, ನೋವಿನ ಕಸುವನ್ನು ತಮ್ಮ ಅನುಭವಗಳ ಮೂಸೆಯೊಳಗೆ ತುಂಬಿಕೊಂಡದ್ದು. ಶಿವಶರಣೆಯರು ಸಮೀಕರಣ, ಸಮಾನತೆಯು, ಬಸವ ಪಥದಲ್ಲಿ ನಡೆದು ತಮ್ಮ ತನದ ಅರಿವು ಶೋಧಿಸಿಕೊಂಡ ಬಗೆ ಅಸದೃಶವಾದದ್ದು. ಆ ದಾರಿಯಲ್ಲಿ ಆಯ್ದಕ್ಕಿ ಲಕ್ಷ್ಮಮ್ಮ, ಅಮುಗೆರಾಯಮ್ಮ ಅಕ್ಕಮ್ಮ. ರಾಮಮ್ಮ, ಗಂಗಮ್ಮ, ಸೋಮಮ್ಮ, ಕದಿರರೆಮ್ಮವ್ವೆ ಮೋಳಿಗೆಯ ಮಹಾದೇವಮ್ಮ, ಕಾಳವ್ವೆ, ಮುಕ್ತಾಯಕ್ಕ, ಸತ್ಯಕ್ಕ, ನೀಲಮ್ಮ, ಲಿಂಗಮ್ಮ, ಸೂಳೆ ಸಂಕವ್ವೆ, ಅಕ್ಕ ನಾಗಮ್ಮ, ಅಕ್ಕಮಹಾದೇವಿ, ಮೊದಲಾದ ಶರಣೆಯರು, ತಂತಮ್ಮ ಬದುಕಿನ ಸತ್ಯಗಳನ್ನೇ ಸಮುದಾಯಕ ಅರಿವಿನ ಪ್ರಜ್ಞೆಗೆ ಹರಿವಿ ಕೊಟ್ಟರು.

"ಕರ್ಮೇಂದ್ರಿಯಂಗಳ ಜರಿದು ಕಡುಗಲಿಯಾದೆನು
ಮರ್ಮವ ನಲೆಗಳೆದು ನಿರ್ಮಳನಾದೆನು
ಅಣ್ಣಾ, ಅಪ್ಪಾ ಎಂದು ಬಿನ್ನಾಣದ ಮಾತ
ನುಡಿಯೆನು
ಅನ್ನ ಕೂಳಿಕ್ಕುವರ ಮನೆಯ ಕುನ್ನಿಗಳಾಗಿಪ್ಪವರ
ಎನಗೆ ಸರಿ ಎಂಬನೆ ಅಮುಗೇಶ್ವರಾ ?"

ಹೆಣ್ಣಿನ ವಿಚಾರಶಕ್ತಿಯು ಮೊನಚು ಶಿವಶರಣೆಯರ ವಚನಗಳಲ್ಲಿ ಶಕ್ತಿಯುತವಾಗಿ ಕಂಡುಬರುವ ಕಾರಣವೆಂದರೆ, ವಚನ ಸಂದರ್ಭ ಶೋಷಿತ ಜನಾಂಗಗಳ, ನೋವಿನ ಕಸುವನ್ನು ತಮ್ಮ ಅನುಭವಗಳ ಮೂಸೆಯೊಳಗೆ ತುಂಬಿಕೊಂಡದ್ದು. ಶಿವಶರಣೆಯರು ಸಮೀಕರಣ, ಸಮಾನತೆಯು, ಬಸವ ಪಥದಲ್ಲಿ ನಡೆದು ತಮ್ಮತನದ ಅರಿವು ಶೋಧಿಸಿಕೊಂಡ ಬಗೆ ಅಸದೃಶವಾದದ್ದು.

ವಿಚಾರವಂತ ಶಿವಶರಣೆಯರ ಸಾಲಿನಲ್ಲಿ ಪ್ರಬುದ್ಧವಾಗಿ ತನ್ನ ಸ್ಪಷ್ಟ ನಿಲುವನ್ನು ದಾಖಲಿಸಿದ ಅಮುಗೆ ರಾಯಮ್ಮನು ಮೇಲಿನ ವಚನದಲ್ಲಿ ಮುಸಗು, ಮೊರಗಗಳನ್ನು ದಿಕ್ಕರಿಸುವ ನಿಜವಾದ ಸ್ವಾಭಿಮಾನದ ಚಿಂತನೆ ಹರಿಸಿ ಕೊಡುತ್ತಾಳೆ.

ಅಂಧಕ ಕೈಯಹಿಡಿದಂತಿರಬೇಕು
ಮೂಗನ ಕೈಯಲ್ಲಿ ಕಾವ್ಯವ ಕೇಳಿದಂತಿರಬೇಕು
ದರ್ಪಣದೊಳಗಣ ಪ್ರತಿಬಿಂಬದಂತೆ
ಹಿಡಿವಂಗಳವಲ್ಲದಿರಬೇಕು, ಅಣ್ಣಾ
ಕೂರ್ಮನ ಶಿಶುವಿನ ಸ್ನೇಹದಂತೆ ಇರಲೊಲ್ಲದೆ
ಅವಿಘಾಢ ಗೆಟ್ಟೆಯೋ ಅಜಗಣ್ಣಾ

ಮನಸ್ಸು, ಮತಿಗಳೆರಡನ್ನೂ ನುಲುಮಿ ಹಿಂಡಿದ, ವಿಚಾರವಾದಿ ಶಿವಶರಣೆ 'ಮುಕ್ತಾಯಕ್ಕ'ನ ಜ್ಞಾನ ಮತ್ತು ಸೃಜನತೆಯು ಪಕ್ವ ವ್ಯಕ್ತಿತ್ವ ಎಲ್ಲಾ ಕಾಲಕ್ಕೂ ಪ್ರಸ್ತುತವೆನಿಸಿ ನೆಲೆಪಡೆದಿದೆ.

ಒಟ್ಟಾರೆ ಹನ್ನೆರಡನೆಯ ಶತಮಾನ ಹೆಣ್ಣು ಪೀಳಿಗೆಗೆ, ಸ್ವಂತಿಕೆ, ಸ್ವಾಭಿಮಾನ ಅರಿವು, ಚಿಂತನೆ ಒಗ್ಗೂಡಿಸಿ, ಮುಖ್ಯವಾಗಿ ಕೆಳವರ್ಗದ ಹೆಣ್ಣು ಮಕ್ಕಳ ಕಷ್ಟ, ಸುಖ, ವಿಚಾರಿಸಿ ಮೈ ತಳೆದು ಬಂದು ಬದುಕಿನ ಅನುಭವಸಾರದ ಪ್ರತೀಕ.

ಸಮಕಾಲೀನರು ಸ್ವಲ್ಪವಾದರೂ ತಿಳಿಯಾದ ಸಾಹಿತ್ಯಕ ಚಿಂತನೆಗಳು ಮೂಡುವಿಕೆಯಲ್ಲಿ ಭರವಸೆಯ ಕಾರಣಗಳು ತೇಲಿ ಬಂದುವು. ಆ ದಿಸೆಯಲ್ಲಿ ಹಲವಾರು ಲೇಖಕಿಯರು ವಿಚಾರ ಶೀಲತೆಯನ್ನು, ಸ್ತ್ರೀ ಸಂವೇದನೆಯನ್ನು ತಮ್ಮ ಕೃತಿಗಳ ಮೂಲಕ ಅಭಿವ್ಯಕ್ತಿ ಪಡಿಸಿದರು. ಹಲವಾರು ಸಂಘಟನೆಗಳು ಸಣ್ಣ ಪತ್ರಿಕೆಗಳೂ ಸಹ ಹೆಣ್ಣಿನ ಸಂವೇದನೆ. ವಿಚಾರವಂತಿಕೆ ಪ್ರಗತಿಪರ ಅಭಿಪ್ರಾಯವನ್ನು ರೂಪಿಸುವಲ್ಲಿ ಯಶಸ್ವಿಯಾಗಿವೆ. ಕನ್ನಡದ ವಿವಿಧ ಪತ್ರಿಕೆಗಳ ಮೂಲಕಲ ಬಹಳಷ್ಟು ಹೆಣ್ಣು ಮಕ್ಕಳು ಲೇಖಕಿಯರು ತಮ್ಮ ಪರಿಸರದೊಳಗಿನ ಹೆಣ್ಣಿನ ಕಷ್ಟ ಸುಖದ ಸಮಸ್ಯೆಗಳನ್ನು ಸಾದರಪಡಿಸುವುದರ ಮೂಲಕ ಬರವಣಿಗೆಯ, ಭರವಸೆಯನ್ನು ಕಂಡರು ಪ್ರಗತಿಪರ ಸಂಘಟನೆಗಳು ಈ ದಿಶೆಯಲ್ಲಿ ಕೈ ಜೋಡಿಸಿರುವುದು ಆಶಾದಾಯಕ ಎಂದೆನ್ನಬಹುದು.

## ಅಸಹಾಯಕಳು

— ಸಿ. ರೂಪ, ಚಿಂತಾಮಣಿ

ಉಕ್ಕಿ ಬಂದಿತ್ತೊಂದು ಕವನ
ಧಾರಧಾರೆಯಾಗಿ ಜೋಗದಂತೆ
ಬರೆಯಲು ಕುಳಿತೆ
ನಾಜೂಕಾಗಿ ಬಂದಿದ್ದ ಸ್ಫೂರ್ತಿ
ಅಲುಗಾಡದಂತೆ, ಅಷ್ಟರಲ್ಲೇ
ಅಮ್ಮನ ಕರೆ !
ಒಲೆಯ ಮೇಲೆ ಹಾಲು !
ಉಕ್ಕಬಹುದು ನೊರೆ
ನೋಡಿಕೋ ಬಾರೆ...

* * *

ಬೆಂಕಿ ತೊಯ್ದಾಡುತ್ತಿತ್ತು
ಗಾಳಿಗೆದುರಾಗಿ ಯಥಾತ್ಃ
ನನ್ನ ಮನಸ್ಸಿನ ಹಾಗೆ,
ನೊರೆ ಉಕ್ಕಲಿಲ್ಲ, ಏರಿಳಿಯುತ್ತಿತ್ತು
ನನ್ನ ಕವನದ ಹಾಗೆ

* * *

ಮತ್ತೆ ಬಂದು ಕುಳಿತಾಗ
ಮೂಡಲಿಲ್ಲ ಕವನ
'ಬಿಳಿಯ ಹಾಳೆಯ' ಮೇಲೆ
ಕಾರಣ,
ನಂದಿಹೋಗಿತ್ತು ಉತ್ಸಾಹ
ಅದೇ ತಾನೆ ಆರಿ ಹೋದ
ಅದೇ ಆ
ಒಲೆಯಂತೆ.

## ಆಹುತಿ

ಪ್ರಭಾಕರ ತಾರಾತನಯ ಉತ್ತನೂರು

ಹಿಡಿ ಬೂದಿಯಾದಳೆ ಮಗಳು
ಹೂವಿನಂತಿದ್ದವಳು
ಹಾವಾಯಿತೇ ತಾಳಿ ವಿಷವಾಯಿತೇ ಜೇನು
ಯಾರ ಶಾಪಕೆ ಹೀಗೆ
ಸುಟ್ಟು ಹೋದಳೋ ಹುಡುಗಿ
ಹೋದ ಶ್ರಾವಣದಲ್ಲಿ ವಧುವಾಗಿ ಹೋದವಳು
ಹರಿದಂಗಿ ತೊಟ್ಟರೂ ತಂದೆ
ಮಗಳಿಗೆ ತಂದಿತ್ತ ಬಂಗಾರದ ಒಡವೆ ವಸ್ತ್ರ
ಇರುವಷ್ಟು ಹೊಲ ಮಾರಿ
ನೂರು ಕಷ್ಟ ಮರೆ ಮಾಡಿ
ಮಗಳ ಕೈಯ ವರನಿಗಿತ್ತ
ನಗುನಗುತ 'ಹರಕೆ' ಹೊತ್ತ
ಯಾರೀಗ ಕೇಳಬೇಕು
ಬಡಮಾಸ್ತರನ ನೋವು
ಬಂದ ಭಾಗ್ಯವ ದೂಡಿ
ದುರುಳರಿಗೆ ಆಸೆ ಮೂಡಿ
ದಹಿಸಿ ಹೋದಳೆ ಬಾಲೆ ಈ ಬಗೆಯಲಿ
ಅವಳಪ್ಪ ಬಡವ ಮತ್ತೇನು ಕೊಟ್ಟಾನು
ಹೂವಂತ ಮಗಳ ಕೊಟ್ಟು
ಕೊಡಲಿಲ್ಲವೆಂಬುವವರ ಹಣದಾಸೆ ಭೂತಕ್ಕೆ
ಬಲಿಯಾದಳೆ ಮುಗ್ಧೆ-ಬೆಂಕಿಯ ತಾ ಬೇದು.

# ಗುಡಿಸಲುಗಳ ನಡುವೆ ಅಕ್ಷರ ಕಲಿಕೆ

— **ಉತ್ತನೂರು ರಾಜಮ್ಮ ವಿ. ಶೆಟ್ಟಿ, ಚಿಂತಾಮಣಿ**

ಚಿಂತಾಮಣಿಯ ಕೆಂಪಮ್ಮ ಬಡಾವಣೆಯ ಕೂಲಿನಾಲಿ ಮಾಡಿ ಬದುಕುವ ಬಡ ಸಂಸಾರಗಳ ಆವರಣದ ಒಳ ಹೊಕ್ಕರೆ ಬದುಕುವ ಹೋರಾಟ ಎಂತದ್ದು ಎನ್ನುವ ಅರಿವಾಗುತ್ತದೆ. ಸರ್ಕಾರದ ಯಾವುದೋ ಕರಾಬು ಜಮೀನು ಅದು. ಈ ಮೊದಲು ಹಾಳುಬಿದ್ದ ಕೆರೆ ಕಟ್ಟೆ ಬಾವಿ ಕುಸಿದು ಬಿದ್ದು ಹಾಳು ಮಂಟಪಗಳಿದ್ದ ಜಾಗ. ಬಾವಿ ಗಡ್ಡೆಯ ಜಾಗದಲ್ಲಿ ಮಾತ್ರ ನಾಲ್ಕಾರು ಗುಡಿಸಲುಗಳಿದ್ದದ್ದು ಈಗ ಸುಮಾರು ನೂರು ಗುಡಿಸಲುಗಳು ಮನುಷ್ಯರ ಓಡಾಟ ಉಸಿರಾಟದೊಂದಿಗೆ ಜೀವ ಪಡೆದಿವೆ.

ನಾವು ವಾಸವಾಗಿದ್ದ ಜಾಗಕ್ಕೆ ಹತ್ತಿರವಿದ್ದ ಈ ಬಡಕೇರಿಯಲ್ಲಿ ಗಾರೆ ಕೆಲಸ, ಕಲ್ಲು ಕೆಲಸ, ಮಣ್ಣು ಕೆಲಸ, ತರಕಾರಿ (ಎರಡನೇ ದರ್ಜೆ) ಹಣ್ಣು ಮಾರುವ, ಮರದ ಕೆಲಸ, ಸೌದೆ ಹೊಡೆಯುವ ಮನೆಗೆಲಸ ಮಾಡುವ ಹೆಣ್ಣು–ಗಂಡುಗಳು, ಪಿಳಿ-ಪಿಳಿ ಮಕ್ಕಳನ್ನು ತುಂಬಿ ಕೊಂಡು ಕಷ್ಟ-ಶ್ರಮಗಳಿಂದ ಜೀವನ ನೀಗುತ್ತಿದ್ದಾರೆ.

ಇಂತಹ ಪರಿಸರದ ಹೆಣ್ಣು ಮಕ್ಕಳಿಗೆ ಅಕ್ಷರಗಳನ್ನು ಕಲಿಸುವುದು ಸಾಧ್ಯವೇ ಎಂದು ಯೋಚನೆ ಬಂದ ನನಗೆ, ಯಾವುದೇ ಪ್ರಯತ್ನಗಳನ್ನು ಮಾಡುವುದರಲ್ಲಿ ಆತಂಕವೇಕೆ ಎಂದಕೊಂಡು, ಪ್ರಗತಿರಂಗದ ಕನಸುಗಳನ್ನು ಹೆಣೆದುಕೊಂಡಿದ್ದ ನಾನು ಕೆಳವರ್ಗದವರ ನೋವುಗಳನ್ನು ಅರ್ಥಮಾಡಿಕೊಂಡಿದ್ದ ಕ. ದ. ಸಂ. ಸ. ದ ಮಹಿಳಾ ಒಕ್ಕೂಟದ ಖಜಾಂಚಿ ಉಮಾ ಮಂಜಪ್ಪ, ವಾರಕ್ಕೆರಡು ಬಾರಿ ಮಾತ್ರ ಕೆಂಪಮ್ಮ ಬಡಾವಣೆಯ ಹೆಣ್ಣು ಮಕ್ಕಳಿಗೆ ಅಕ್ಷರ ಕಲಿಸುವ ಯೋಚನೆ ಮಾಡಿ ಆ ಕೇರಿಯ ಒಳ ಹೊಕ್ಕೆವು.

ತೆಂಗಿನಗರಿ, ಈಚಲು ಪಟ್ಟೆ, ಹಳೆ ತಗಡು ರೇಖುಗಳನ್ನು ಅಡ್ಡವಾಗಿಸಿಕೊಂಡು ಬಚ್ಚಲು ಮರೆಯಲ್ಲಿ ಗಲಗಲ ಬಳೆನಾದದಲ್ಲಿ ಪಾತ್ರೆ ತೊಳೆಯುತ್ತಿದ್ದ ಮೇಸ್ತ್ರಿ ವೆಂಗಟರಮಣಪ್ಪನ ಎಂಡ್ರು ಮುನೆಮ್ಮ, ಪೈಂಟು ಬಳಿಯುವ ರಾಮಾಂಜಿಯ ಹೆಂಡತಿ ಆಂಜನಮ್ಮ, ಸುಣ್ಣ-ಬಣ್ಣ ಮಾಡುವ ಮುನೆಪ್ಪನ ಅರ್ಧಾಂಗಿ ಮುನೆಕ್ಕ-ಇನ್ನಿತರ ಕೆಲಸ ಮಾಡುವ ವೆಂಗಟಲಚ್ಚಮ್ಮ, ಸುಬ್ಬಲಚ್ಚಮ್ಮ, ವೆಂಗಟಮ್ಮ, ಪರ್ವಿನ, ಮುಬೀನ, ಎಲ್ಲರೂ ನಮ್ಮ ಸುತ್ತ ಆವರಿಸಿಕೊಂಡರು.

ಆ ಕೇರಿಗೆ ಒಂದು ಪ್ರಕೃತಿದತ್ತ ಕೊಡುಗೆ, ಒಂದು ದೊಡ್ಡ ಹುಣಿಸೆಮರ. ಅದರ ನೆರಳಲ್ಲಿ ಒಂದಿಷ್ಟು ಒಳ್ಳೆಯ ಗಾಳಿ-ತಂಪು ಸಿಗುತ್ತದೆ. ಪ್ರತಿ ಗುಡಿಸಲ ಮುಂದೆ ಹಚ್ಚಗೆ ಸಗಣಿಯಲ್ಲಿ ಸಾರಿಸಿ, ರಂಗೋಲಿ ಬಿಡಿಸಿ, ದಾಲಬಂದರದ ದ್ವಾರಕ್ಕೆ ತೋರಣ ಕಟ್ಟಿ ಹೊಸಲಿಗೆ ಹರಿಸಿನ-ಕುಂಕುಮ ಹಚ್ಚಿದ್ದಾರೆ. ಬಡ ಗುಡಿಸಲಿಗೂ ಸಹ ಹೆಣ್ಣಾದವಳು ಎಂತಹ ಕಲಾತ್ಮಕ ಚೌಕಟ್ಟು ಕೊಡಬಲ್ಲಳು ಎನ್ನುವುದನ್ನು ಕಾಣಬೇಕಾದರೆ ಇಂತ ಗುಡಿಸಲುಗಳನ್ನು ಒಳಹೊಕ್ಕು ನೋಡಬೇಕು.

ಹುಣಿಸೆ ಮರದ ಕೆಳಗೆ ಒಂದು ಹರಕಲು ಚಾಪೆ ಹಾಕಿದರು. ಮಕ್ಕಳೆಲ್ಲರೂ ಬಂದು ಸುತ್ತುವರೆದು ಕುಳಿತರು, ಹೆಂಗಸರಾರೂ ಮನೆಯ ಒಳಗಿನ ಕೆಲಸ ಬದಿಗಿಟ್ಟು ನಮ್ಮ ಹತ್ತಿರ ಬಂದು ಕುಳಿತುಕೊಳ್ಳಲಿಲ್ಲ. ಒಂದರ್ಧ ಗಂಟೆ ಬಂದು ಇಲ್ಲಿ ಕುಳ್ರಮ್ಮ ಎಂದು ಎಷ್ಟು ಕೇಳಿಕೊಂಡರೂ ಬಂದೆ ಇರ್ರಕ್ಕೊ ಕಾರ ಅರೆದು ಬಿಟ್ಟು ಅಂತ ಒಬ್ಬಾಕೆ, ಒಲೆ ಉರಿ ನಂಜೋತದೆ, ಪುರಲೆ ಸೌದೆ ಕಣಕ್ಕೊ, ಅಂತ ಇನ್ನೊಬ್ಬಾಕೆ. ಎಲ್ಲರಿಗೂ ದುಡಿದು ಬಂದು ಆಯಾಸ ಹಸಿವು, ಸರಾಫರಾ ಹಿಟ್ಟು ಬೇಯಿಸಿಕೊಳ್ಳೋದು, ತಟ್ಟೆ ಪಾತ್ರೆ ತೊಳಕೊಣಾದು, ಅವರದೇ ಕೆಲಸ ಗುಡ್ಡದಷ್ಟಿರುತ್ತಿತ್ತು. ಯಾರೂ ನಮ್ಮ ಹತ್ತಿರ ಬರದೇ ಅಕ್ಷರ ಕಲಿಯುವ ಆಸಕ್ತಿ ತೋರದೆ, ನಮಗೆ ಮನಸ್ಸು ಖಿನ್ನವಾಯಿತು. ನಾವು ಸಪ್ಪೆಮುಖ ಮಾಡಿಕೊಂಡಾಗ ಅದೇ

ಕೇರಿಯ ಲಚ್ಮಗಾ ಹೇಳಿದ ಯಕ್ಕಾ ನಮ್ಮಮ್ಮ ಬರೀನೆ ಮುದ್ದೆ ಕಲಕಿ ಉಂಡುಬಿಟ್ಟು ಸಿಲೀಮಾಗೆ ಓಗ ಬೇಕೂಂತವಳೆ ಅದ್ಕೆ ಬರ್‍ನಿಲ್ಲ ಅಂದ. ನಾನೂ ಉಮ ಮಂಜಪ್ಪ ಆದದ್ದಾಗಲಿ ಎಂದು ಲಚ್ಮಗಾನ ಗುಡಿಸಲ ಹೊಸಲಿಗೆ ಬಂದು ಕುಳಿತು, ಒಲೆ ಹುರಿ ಹಾಕುತ್ತಿದ್ದ ಎಂಕಟಲಚ್ಚಮ್ಮನಿಗೆ ಇಲ್ನೋಡಮ್ಮೋ ಅಂಬರೀಷ್ ಸಿನಿಮಾ ಬಂದದಂತೆ. ಪೇಪರ್‍ನಾಗೆ ಫೋಟೋ ಬಂದದೆ ನೋಡು ಅಂತ ಅಂಬರೀಷ್ ಫೋಟೋ ಕೆಳಗೆ ಹೆಸರೂ ಇದ್ದ ಪತ್ರಿಕೆ ತೋರಿಸಿದೆ. ಲಕ್ಕಂತ ಕೈನಿಂದ ಪತ್ರಿಕೆ ಇಸಕೊಂಡು ತದೇಕವಾಗಿ ದೃಷ್ಟಿಸತೊಡಗಿದಳು. ಇದೇ ಸಮಯಾಂತ ಆಕೆಯ ಒಲೆ ಸನಿಹವಿದ್ದ ಇಜ್ಜಲು ಕಣದಲ್ಲಿ ಒಲೆ ಪಕ್ಕವೇ ಆ-ಅಂಬರೀಶ್ ಬರೆದು ತೋರಿಸಿದ ತಕ್ಷಣ ತಾನೂ ಕಷ್ಟಪಟ್ಟು ಅ-ಅ ಎರಡು ಸಲ ಬರೆದು ಅಂಬರೀಷ್ ವಕ್ರವಾಗಿ ಬರೆದಳು. ಹೀಗೆ ಹತ್ತು ಸಲ ತಿದ್ದಿ, ಅಂಬಿಕಾ ಎಸ್ರು ಬರಕೊಡಕ್ಕೊ ಎಂದಾಗ ಒಟ್ಟಾರೆ ಅ ಅನ್ನುವುದು ಆ ಮಹರಾಯ್ತಿಗೆ ಮನಸಲ್ಲಿ ನಿಲ್ತಲ್ಲಾ ಎಂದುಕೊಂಡು, ಈಗೀಗ ವಾರಕ್ಕೆ ಒಂದೆರಡು ಸಲ ಆ ಕೇರಿಯ ಹೆಂಗಸರ ಒಲೆಯ ಮುಂದೆಯೇ ಅವರವರಗಿಷ್ಟ ಬರುವ ಹೀರೋ ಹೀರೋಯಿನ್‌ಗಳ ಹೆಸರಲ್ಲೇ ಒಂದೊಂದು ಅಕ್ಷರ ಮನಗಾಣಿಸಿ ತಿದ್ದಿಸಲು ಶುರು ಮಾಡಿದ್ದೇವೆ.

●

---

# ಮಹಿಳಾ ಅಧ್ಯಯನದ ಆರನೆಯ ರಾಷ್ಟ್ರೀಯ ಸಮ್ಮೇಳನ

'ಇಂಡಿಯನ್ ಅಸೋಸಿಯೇಷನ್ ಫಾರ್ ವಿಮೆನ್ಸ್ ಸ್ಟಡೀಸ್'—ಈ ಕೇಂದ್ರದಲ್ಲಿ ರಾಷ್ಟ್ರಮಟ್ಟದ ಮಹಿಳಾ ಸಂಘಟನೆಗಳ ಕಾರ್ಯಕರ್ತರು ಹಾಗೂ ಮಹಿಳಾ ಪ್ರಶ್ನೆಗಳನ್ನು ವೈಚಾರಿಕ ನೆಲೆಗಟ್ಟನ್ನು ಶೋಧಿಸುವ ಎರಡೂ ರೀತಿಯ ಸದಸ್ಯರಿದ್ದಾರೆ. 1981ರಲ್ಲಿ ಮೊದಲನೆಯ ಬಾರಿ ಬಾಂಬೆಯಲ್ಲಿ ನಡೆದ ರಾಷ್ಟ್ರೀಯ ಸಮ್ಮೇಳನದ ಫಲಿತಾಂಶವಾಗಿ ಉದಯಿಸಿದ ಈ ಸಂಸ್ಥೆ ಇಲ್ಲಿಯವರೆಗೆ ಐದು ರಾಷ್ಟ್ರಿಯ ಸಮ್ಮೇಳನಗಳನ್ನು ಮಾಡಿದೆ. ಈಗ ಆರನೆಯ ಮಹಿಳಾ ಅಧ್ಯಯನದ ಸಮ್ಮೇಳನ ಮೈಸೂರಿನಲ್ಲಿ ಮೇ 31ರಿಂದ ಜೂನ್ 3ರವರೆಗೆ ನಡೆಯಲಿದೆ. ಆಸಕ್ತಿಯುಳ್ಳ ಕರ್ನಾಟಕದ ಮಹಿಳೆಯರಿಗೆ ಮೈಸೂರಿನಲ್ಲಿ ನಡೆಯುವ ಈ ರಾಷ್ಟ್ರೀಯ ಮಹಿಳಾ ಅಧ್ಯಯನದ ಅಧಿವೇಶನದಲ್ಲಿ ಭಾಗವಹಿಸಲು ಸಾಧ್ಯವಾಗಲೆಂಬ ದೃಷ್ಟಿಯಿಂದ IAWS ಈ ಬಗ್ಗೆ ವಿವರವಾಗಿ ತಂದಿರುವ ಒಂದು ಚಿಕ್ಕ ಹೊತ್ತಿಗೆಯ ಮುಖ್ಯವಾದ ವಿಚಾರಗಳ ಸಂಕ್ಷಿಪ್ತ ಅನುವಾದವನ್ನು ಮಾನಸದಲ್ಲಿ ಪ್ರಕಟಿಸುತ್ತಿದ್ದೇವೆ

ಈ ಸಮ್ಮೇಳನದ ಮುಖ್ಯ ವಸ್ತು 'ಹೊಸ ಆರ್ಥಿಕ ನೀತಿಯ ಆಯಾಮಗಳು–ಮಹಿಳೆಯರಿಗೆ ಇದರಿಂದ ಉಂಟಾಗುವ ಪರಿಣಾಮಗಳು.' ಈಗಿರುವ ಹೊಸ ಆರ್ಥಿಕ ನೀತಿಯು ಲಿಂಗ ಹಾಗೂ ವರ್ಗದ ಮೇಲೆ ತನ್ನದೇ ಆದ ವಿಶಿಷ್ಟ ಪರಿಣಾಮವನ್ನು ಬೀರುತ್ತದೆ. ಮಹಿಳೆಯರ ಮೇಲೆ ಉಂಟಾಗುವ ದುಷ್ಪರಿಣಾಮಗಳನ್ನು ಕುರಿತು ಆರ್ಥಿಕ ನೀತಿಯ ಸೂತ್ರದಾರರಾಗಲೀ, ನ್ಯಾಯ ವಾದಿಗಳಾಗಲೀ, ಆಡಳಿತಾಧಿಕಾರಿಗಳಾಗಲೀ, ಮಾಧ್ಯಮ ಗಳಾಗಲೀ ಅಥವಾ ಸಾರ್ವಜನಿಕರಾಗಲೀ ಈ ಬಗ್ಗೆ ಯಾವ ಧ್ವನಿಯನ್ನೂ ಎತ್ತಿಲ್ಲ. ಈ ಬಗ್ಗೆ ವಿವರವಾಗಿ ಚರ್ಚಿಸಲು ಹಾಗೂ ನಿಲುವು ತಳೆಯಲು ಸಾಧ್ಯವಾಗುವಂತಹ ರೀತಿ ಯಲ್ಲಿ ಈ ಸಮ್ಮೇಳನವನ್ನು ಎರಡು ವಿಭಾಗಗಳನ್ನಾಗಿ ಮಾಡಿಕೊಳ್ಳಲಾಗಿದೆ. ಹೊಸ ಆರ್ಥಿಕ ನೀತಿಯ ಆಯಾಮಗಳು ಮಹಿಳೆಯರ ಮೇಲೆ ಬೀರುತ್ತಿರುವ ದುಷ್ಪರಿಣಾಮಗಳನ್ನು ಬೆಳಕಿಗೆ ತರಲು ಸಾಧ್ಯವಾಗುವಂತೆ ಈ ಎಂಟು ವಿಭಾಗಗಳಲ್ಲಿ ವಸ್ತುವನ್ನು ವಿಂಗಡನೆ ಮಾಡಿ ಕೊಳ್ಳಲಾಗಿದೆ. ಹೊಸ ಆರ್ಥಿಕ ನೀತಿಯ ಬಗ್ಗೆ ಒಂದು ನಿಲುವು ತಳೆಯುವ ಮೂಲಕ IAWS ಮಹಿಳೆ ಯರ ಪರವಾಗಿ ಲಾಬಿ ಮಾಡಲು ನಿರ್ಧರಿಸಿದೆ. ಇಂತಹ ಚಟುವಟಿಕೆಗಳನ್ನು ನ್ಯಾಷನಲ್ ಕಮಿಷನ್ ಫಾರ್ ವಿಮೆನ್ ಹಾಗೂ ಮಹಿಳಾ ಸಂಘಟನೆಗಳ ಜೊತೆ ಒಗ್ಗೂಡಿ ನಡೆಸುವುದು IAWS ಗೆ ಇರುವ ಆಶಯ.

ಈ ರಾಷ್ಟ್ರೀಯ ಮಹಿಳಾ ಅಧ್ಯಯನದ ಎಂಟು ವಿಭಾಗಗಳು ಈ ಕೆಳಕಂಡಂತಿವೆ.

**ಉದ್ಯೋಗ, ಆಹಾರ, ಭದ್ರತೆ :**

ಈ ವಿಭಾಗದಲ್ಲಿ ಹೊಸ ಆರ್ಥಿಕ ನೀತಿಯು ವಿದೇಶೀ ವಿದೇಶಿ ಉದ್ಯಮ ಸಾಲ ಇವುಗಳ ಮೇಲೆ ಬೀರುವ ಪ್ರಭಾವ ; ಹಳ್ಳಿ,ಪಟ್ಟಣಗಳಲ್ಲಿ ಉದ್ಯೋಗಾವಕಾಶಗಳ ಮೇಲೆ ಬೀರುವ ಪ್ರಭಾವ ; ಕೈಗಾರಿಕೋದ್ಯಮದಲ್ಲಿ. ರಫ್ತು ಉದ್ಯಮಗಳಲ್ಲಿ, ಮಲ್ಟಿ ನ್ಯಾಷನಲ್ ಸಂಸ್ಥೆಗಳಲ್ಲಿ ದುಡಿಯುವ ಮಹಿಳೆಯರ ಭಾಗವಹಿಸುವಿಕೆಯಲ್ಲಿ ಉಂಟಾಗುವ ವ್ಯತ್ಯಾಸಗಳು, ಶ್ರಮದ ಮಾರುಕಟ್ಟೆಯಲ್ಲಿ ಉದ್ಯೋಗದ ಸ್ಥಿತಿ-ಗತಿಗಳು ಇಂತಹ ವಿಚಾರಗಳನ್ನು ಇಲ್ಲಿ ಚರ್ಚಿಸಲಾಗುತ್ತದೆ. ಕೆಲಸ ಹಾಗೂ ಆಹಾರ ಭದ್ರತೆಯಲ್ಲಿ ದಕ್ಷಿಣ ಅಮೇರಿಕಾ ಹಾಗೂ ಏಷ್ಯಾದ ಮಹಿಳೆಯರ ಅನುಭವಗಳಿಂದ ಭಾರತದ ಮಹಿಳೆಯರ ಮೇಲೂ ಉಂಟಾಗುವ ದುಷ್ಪರಿಣಾಮಗಳನ್ನು ಚರ್ಚಿಸಲಾಗುವುದು. ಈ ವಿಭಾಗದ ನಿರ್ವಾಹಕಿ ಇಂದಿರಾ ಹಿರ್‌ವೇ, ಗಾಂಧಿಲೇಬರ್ ಸಂಸ್ಥೆ, ಅಹಮದಾಬಾದ್.

**ವಿದ್ಯಾಭ್ಯಾಸ, ಸಂಸ್ಕೃತಿ, ಮಾಧ್ಯಮ**

ಇಂದು ಮಹಿಳೆಯರ ಸ್ಥಿತಿ ಗತಿಯನ್ನು ಅರ್ಥಮಾಡಿಕೊಳ್ಳಲು ಬದಲಾಗುತ್ತಿರುವ ಆರ್ಥಿಕ ರಾಜಕೀಯ ಸ್ಥಿತಿಯನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಹೊಸ ಆರ್ಥಿಕ ನೀತಿಯು ಮಾಧ್ಯಮ, ಸಂಸ್ಕೃತಿ ಹಾಗೂ ಮಾಧ್ಯಮಗಳಲ್ಲಿ ಮಹಿಳೆಗ ಸಂಬಂಧಿಸಿದಂತೆ ಮಾಡುವ ಪ್ರಭಾವ ವಿರೋಧಾಭಾಸ ಹಾಗೂ ಸಂಕೀರ್ಣತೆಗಳಿಂದ ಕೂಡಿದ್ದು ಬೆಳೆಯುತ್ತಿರುವ ವಾಣಿಜ್ಯ ವ್ಯವಸ್ಥೆಯಲ್ಲಿ ಮಾಧ್ಯಮಗಳು ಮಹಿಳೆಯ ಅಸ್ತಿತ್ವ ಹಾಗೂ ವ್ಯಕ್ತಿತ್ವ ನಿರೂಪಿಸುವುದರಲ್ಲಿ ಸಂಶಯವಿಲ್ಲ. ಮಹಿಳೆಯರ ವಿದ್ಯಾಭ್ಯಾಸ ಹಾಗೂ ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಹೊಸ ಆರ್ಥಿಕ ನೀತಿಯ ಪ್ರವೇಶದ ಸಾಧ್ಯತೆಗಳಿವೆ. ಇಂದಿನ ಸಂದರ್ಭಗಳ ಶ್ರಮಿಕ ವರ್ಗಕ್ಕೆ ವಿದ್ಯಾವಂತ ಮಹಿಳಾ ವರ್ಗದ ಅಗತ್ಯವಿದೆ. ಆದಾಗ್ಯೂ ಬಲ ಪಂಥೀಯ ಪಕ್ಷಗಳು, ಮೂಲಭೂತವಾದಿಗಳು ಮಹಿಳಾ ವಿದ್ಯಾಭ್ಯಾಸಕ್ಕೆ ತರುತ್ತಿರುವ ವೈಚಾರಿಕ ಬೆದರಿಕೆಗಳನ್ನು ನಿರ್ಲಕ್ಷಿಸುವಂತಿಲ್ಲ. ವಿದ್ಯಾಭ್ಯಾಸ, ಮಾಧ್ಯಮ ಹಾಗೂ ಸಂಸ್ಕೃತಿ ಇವುಗಳು ಮಹಿಳೆಯರಿಗೆ ಸಂಬಂಧಿಸಿದಂತೆ ನಾವು ಅನೇಕ ಸವಾಲುಗಳನ್ನು ಎದುರಿಸಬೇಕಾಗುತ್ತದೆ ಹಾಗಾಗಿ ಈ ವಿಭಾಗದ ಚರ್ಚೆ ಈ ಮೂರು ವಿಚಾರಧಾರೆಯ ಒಟ್ಟು ನೋಟವನ್ನು ವಿಶ್ಲೇಷಿಸಲು ಸಹಾಯಕವಾಗಲಿ ಎಂಬುದು ಉದ್ದೇಶ. ಇದರ ನಿರ್ವಾಹಕಿ ಅಖಿಲಾ ಶಿವಾದಾಸ್, ದೆಹಲಿ.

**ಆರೋಗ್ಯ ಮತ್ತು ಜನಸಂಖ್ಯೆ**

ಭಾರತೀಯ ಮಹಿಳೆಯ ಆರೋಗ್ಯ ಯಾವಾಗಲೂ ಇಳಿಮುಖವಾಗಿಯೇ ಇರುತ್ತದೆ. ಈ ಬಗ್ಗೆ ಸಾಕಷ್ಟು ಚರ್ಚೆಗಳು ನಡೆದು ಕಾರಣಗಳನ್ನು ಗುರುತಿಸಲ್ಪಟ್ಟಿದ್ದರೂ ಸಾಮಾಜಿಕ/ಆರ್ಥಿಕ ವ್ಯವಸ್ಥೆಯಲ್ಲಿ ಮಹಿಳೆಯ ಕೊಡುಗೆಯನ್ನು ನಿರ್ಲಕ್ಷಿಸುತ್ತಿರುವುದು ಕಂಡು ಬರುತ್ತದೆ. ಹೊಸ ಆರ್ಥಿಕ ನೀತಿಯ ಸಂದರ್ಭದಲ್ಲಿ ಇದರ ಮುಖ್ಯ ಬಲಿ ಪಶುಗಳು ಮಹಿಳೆಯರೇ ಆಗಿರುತ್ತಾರೆ. ಲಿಂಗಾಧಾರ ಭಿನ್ನತೆಯ ವಿದ್ಯಾಭ್ಯಾಸದಲ್ಲಿ, ಆರೋಗ್ಯದ ಸೇವೆಗಳಿಗೆ ಕಾಲ ಹಾಗೂ ಅವಕಾಶ ಇಲ್ಲದಿರುವಿಕೆ, ಅಸಮತೋಲನ ಆಹಾರ ವಿತರಣೆಯಿಂದಾಗ ಮಹಿಳೆಯರ ಆರೋಗ್ಯಕ್ಕೆ ಬೀಳುವ ಒತ್ತಡ, ಅಧಿಕ ವಲಸೀಕರಣ, ಸ್ಥಳಾಂತರ, ಪ್ರಕೃತಿದತ್ತ ಸಂಪನ್ಮೂಲಗಳ ನಾಶ, ಸೌದೆ, ಹುಲ್ಲುಗಳ ಸಂಗ್ರಹಣೆಗೆ ಹಾಕುವ ಶ್ರಮ, ಹೊಸದಾಗಿ ಆದಾಯಕ್ಕಾಗಿ ಹಾಕುವ ಶ್ರಮದ ಒತ್ತಡ-ಇಂತಹವುಗಳನ್ನು ಆರ್ಥಿಕ ಹಾಗೂ ವೈಯುಕ್ತಿಕ ಹಂತದಲ್ಲಿ ಚರ್ಚಿಸಲಾಗುತ್ತಿದೆ. ಇದರ ನಿರ್ವಾಹಕಿ–ಮೀರಾಶಿವ, ದೆಹಲಿ

**ಕುಟುಂಬ ಮತ್ತು ಸಾಮಾಜಿಕ ಭದ್ರತೆ**

ಹೊಸ ಆರ್ಥಿಕ ನೀತಿಯು ಮಹಿಳೆಯರಲ್ಲಿ ಸಾಮಾಜಿಕ ಭದ್ರತೆಯ ಪ್ರಶ್ನೆಯನ್ನು ಎತ್ತುತ್ತದೆ. ಈ ಪ್ರಶ್ನೆಯನ್ನು ಮಕ್ಕಳು, ವಿಧವೆಯರು, ವಿವಾಹ ವಿಚ್ಛೇದನ ಪಡೆದವರು ಇಂತಹವರ ಸಂದರ್ಭಗಳಿಗೆ ಅನುಗುಣವಾಗಿ ಚರ್ಚಿಸಬೇಕಾಗುತ್ತದೆ. ಏಕಾಂಗಿ ಹೆಂಗಸರ ಭದ್ರತೆ, ಅವರ ವಾಸ್ತವ್ಯ, ಆರೋಗ್ಯ ಸೌಲಭ್ಯಗಳು, ಮಕ್ಕಳ ಲಾಲನೆ ಪಾಲನೆಯ ಕೇಂದ್ರಗಳು, ಪೆನ್‌ಶನ್, ಪ್ರಾವಿಡೆಂಟ್ ಫಂಡ್ ಇತ್ಯಾದಿಗಳ ಮೇಲೆ ಈ ವಿಚಾರಧಾರೆ ಬೆಳಕು ಚೆಲ್ಲುತ್ತದೆ. ಈ ಸಂಕಿರಣದ ನಿರ್ವಾಹಕಿ ಛಾಯಾ ದಾತಾರ್ ಬಾಂಬೆ

**ಪ್ರಾಕೃತಿಕ ಸಂಪನ್ಮೂಲಗಳು ಮತ್ತು ಪರಿಸರ**

ಹೊಸ ಆರ್ಥಿಕ ನೀತಿ ಪ್ರಾಕೃತಿಕ ಸಂಪನ್ಮೂಲಗಳನ್ನು ಹೆಚ್ಚು ನಿಯಂತ್ರಿಸುವುದರ ಮೂಲಕ ಜನರ ಬದುಕನ್ನು ವಿಶೇಷವಾಗಿ ಮಹಿಳೆಯರ ಬದುಕನ್ನು ದುರ್ಲಭಗೊಳಿಸುತ್ತಿದೆ. ಹುಲ್ಲು, ಸೌದೆ, ಕಾಡು, ಮೀನು ಇತ್ಯಾದಿಗಳ ಮೇಲೆ ಅವಲಂಬಿಸಿ ಸಾಂಪ್ರದಾಯಿಕ ಉದ್ಯೋಗಗಳನ್ನು ನೆಚ್ಚಿಕೊಂಡಿರುವವರ ಬದುಕನ್ನೇ ಹೊಸ ಆರ್ಥಿಕ ವ್ಯವಸ್ಥೆ ಚೆಲ್ಲಾಪಿಲ್ಲಿಯಾಗಿಸುತ್ತಿದೆ. ಪರ್ಯಾಯ ಉದ್ಯೋಗದ ವ್ಯವಸ್ಥೆ ಮಾಡದೇ ಹೀಗೆ ಸಾಂಪ್ರದಾಯಿಕ ಕೆಲಸಗಳನ್ನೇ ಕಸಿದುಕೊಂಡು ಬಿಡುವುದರಿಂದ ಮಹಿಳೆಯರ ಬದುಕು ಎಡಬಿಡಂಗಿಯಾಗುತ್ತದೆ. ಈ ಚರ್ಚೆಯ ನಿರ್ವಾಹಕಿ ಮಧು ಸರೀನ್, ಚಂದೀಘರ್

**ಹಿಂಸೆ ಮತ್ತು ಸಮುದಾಯ**

ಮನೆಯ ಒಳಗೆ ಹಾಗೂ ಹೊರಗೆ ಹೆಂಗಸಿನ ಮೇಲೆ ನಡೆಯುವ ಹಿಂಸೆ ಗಂಭೀರ ತೆರನಾದ್ದು. ರಾಜ್ಯ/ಸರ್ಕಾರ/ಪ್ರಭುತ್ವಗಳು ಈ ಹಿನ್ನೆಲೆಯಲ್ಲಿ ನಡೆಸುವ ಹಿಂಸೆಯತ್ತ ನಾವು ಗಮನವೀಯಬೇಕಾಗುತ್ತದೆ. ಕೋಮುವಾದಿಗಳು, ಉಗ್ರಗಾಮಿಗಳು ನಡೆಸುವ ಹಿಂಸೆಗಳನ್ನು ಈ ಹಿನ್ನೆಲೆಯ ದೃಷ್ಟಿಯಿಂದ ಶೋಧಿಸಬೇಕಾಗುತ್ತದೆ. ಸ್ವಾಯತ್ತ ಮಹಿಳಾ ಸಂಸ್ಥೆಗಳೂ ಈ ಹಿಂಸೆಯನ್ನು ತಡೆಗಟ್ಟುವಲ್ಲಿ ಬಳಸಿಕೊಳ್ಳುವ ತಂತ್ರಗಳೂ ಹಾಗೂ ಪಕ್ಷದ ಮಹಿಳಾ ಸಂಘಟನೆಗಳು ಬಳಸುವ ತಂತ್ರಗಳನ್ನು ಚರ್ಚೆಯಲ್ಲಿ ಚರ್ಚಿಸುವುದು ಅಗತ್ಯ. ಇದರ ನಿರ್ವಾಹಕಿ ಜಸ್‌ಜೀತ್ ಪುರ ನೌವ್ ನ್ಯೂಡೆಲ್ಲಿ

**ಮಧ್ಯಪಾನ ಮತ್ತು ಮಾದಕವಸ್ತು ಬಳಕೆ**

ಮದ್ಯಪಾನದ ದುಷ್ಪರಿಣಾಮ ಕೊನೆಗೆ ಉಂಟಾಗುವುದು ಮಹಿಳೆಯರ ಮೇಲೆಯೇ ಈ ಬಗ್ಗೆ ಅಧಿಕ ವಿರೋಧಗಳು ಉಂಟಾಗಿರುವುದು ಮಹಿಳೆಯರಿಂದಲೇ. ಈ ಬಗ್ಗೆ ಅನೇಕ ಮಹಿಳಾ ಸಂಘಟನೆಗಳು ಧ್ವನಿ ಎತ್ತಿ ಕೆಲಸ ಮಾಡಿವೆ. ಇಲ್ಲಿ ಕೆಲವು ಪ್ರಶ್ನೆಗಳನ್ನು ಎತ್ತಬೇಕಾಗುತ್ತದೆ.

ಮದ್ಯಪಾನದ ತಡೆಗಟ್ಟುವಿಕೆ ಒಂದು ಉತ್ತರವಾಗಬಹುದೇ ?

ಮದ್ಯಪಾನದ ಪೂರ್ತಾ ತಡೆಗಟ್ಟುವಿಕೆ ಸಾಧ್ಯವಾಗುತ್ತದೆಯೇ ?

ಮದ್ಯಪಾನ ತಡೆಗಟ್ಟಿದರೆ ಆ ಸ್ಥಳದಲ್ಲಿ ಮಾದಕ ವಸ್ತುಗಳ ಬಳಕೆ ಪ್ರಾರಂಭವಾಗುವುದಿಲ್ಲವೇ ? ಇಂತಹ ಪ್ರಶ್ನೆಗಳು ಪ್ರಸ್ತುತ ಸಂದರ್ಭದಲ್ಲಿ ಆಗತ್ಯವಾಗುತ್ತವೆ. ಇದರ ನಿರ್ವಹಣೆ–ಸುಭಾಷ್ ಮೇಧಾರ್ ಪುರ್‌ತರ

**ರಾಜಕೀಯ ರಚನೆಗಳು ಮತ್ತು ಇತರ ಹಂತಗಳು**

ಇಲ್ಲಿ ಸಂವಿಧಾನದ ಹಕ್ಕುಗಳ ಬಗ್ಗೆ, ಮಹಿಳೆಯರಿಗೆ ನೀಡಿರುವ ಗ್ಯಾರಂಟಿಯ ಬಗ್ಗೆ, ಔಪಚಾರಿಕ ರಾಜಕೀಯದಲ್ಲಿ ಮಹಿಳೆಯರ ಭಾಗವಹಿಸುವಿಕೆ, ಪಂಚಾಯತ್ ರಾಜ್ಯಗಳಲ್ಲಿ ಹೆಂಗಸರ ಭಾಗವಹಿಸುವಿಕೆ ಇಂತಹ ವಿಚಾರಗಳ ಮೇಲೆ ಈ ಚರ್ಚೆಯಲ್ಲಿ ಬೆಳಕು ಚೆಲ್ಲಲು ಪ್ರಯತ್ನಿಸಲಾಗುತ್ತದೆ. ಈ ಭಾಗದ ವಿಚಾರ ಸಂಕಿರಣದ ನಿರ್ವಹಣೆ-ಸುಶೀಲಾ ಕೌಶಿಕ್, ಡೆಲ್ಲಿ.

ಈ ಸಂಕಿರಣದಲ್ಲಿ ಭಾಗವಹಿಸುವವರು ಇದಕ್ಕಾಗಿ ಅರ್ಜಿಗಳನ್ನು ಈ ಕೆಳಗಿನ ವಿಳಾಸದಿಂದ ಪಡೆಯಬಹುದು.

ರಾಮೇಶ್ವರಿ ವರ್ಮ  
ನಿರ್ದೇಶಕಿ  
ಸೆಂಟರ್ ಫಾರ್ ವಿಮೆನ್ಸ್ ಸ್ಟಡೀಸ್  
ಮೈಸೂರು ವಿಶ್ವವಿದ್ಯಾನಿಲಯ  
ಮಾನಸ ಗಂಗೋತ್ರಿ  
ಮೈಸೂರು-570 006

ಈ ಸಂಕಿರಣದಲ್ಲಿ ಪುಸ್ತಕ ಮಾರಾಟ ಹಾಗೂ ಪ್ರದರ್ಶನ ಮಾಡಬಹುದು.

ಊಟ ಹಾಗೂ ವಸತಿ ಸೌಲಭ್ಯಗಳನ್ನು ಮೈಸೂರು ವಿಶ್ವವಿದ್ಯಾನಿಲಯದವರು ವ್ಯವಸ್ಥೆ ಮಾಡಿದ್ದಾರೆ.

ಸಂಕಿರಣದಲ್ಲಿ ಭಾಗವಹಿಸಲು ರೂ. 275-ರೂ  
ವಿದ್ಯಾರ್ಥಿಗಳಿಗೆ 150-ರೂ

ಈ ಸಂಕಿರಣದ ಅರ್ಜಿಗಳನ್ನು ಹಣದ ಜೊತೆ (M-O. Bank Draft) Organising Secretary, Sixth National Conference in Women Studies. Univercity of Mysore ಇವರಿಗೆ ಕಳಿಸಿ.

# ನಯವಂಚನೆಯ ನೋವಿನಲ್ಲಿ

— ಶ್ರೀಮತಿ ಶ್ರೀವಾಣಿ ಪ್ರಹ್ಲಾದರಾವ್

ಅಪರ್ಣಾ 23ರ ಹರೆಯದ ತರುಣಿ. ಸಂಪಿಗೆ ನಾಸಿಕ ತೊಂಡೇ ಹಣ್ಣಿನ ತುಟಿಗಳು, ದಾಳಿಂಬೆ ಬೀಜದ ದಂತ ಪಂಕ್ತಿಯುಳ್ಳ ಸ್ಫುರದ್ರೂಪಿ ಹೆಣ್ಣಲ್ಲದಿದ್ದರೂ ಕುರೂಪಿಯಲ್ಲದ, ಆರೋಗ್ಯವಂತ, ಧೃಡಕಾಯದ ಮಧ್ಯಮ ರೂಪಿನವಳು. ಪದವೀದರೆಯಾದ ಈಕೆ ಹಲವಾರು ಆದರ್ಶಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂಬ ಹೊಂಗನಸು ಕಾಣುವ ಖಾಸಗೀ ಸಂಸ್ಥೆಯೊಂದರಲ್ಲಿ ದುಡಿಯುತ್ತಿರುವ ಉನ್ನತ ಸಂಸ್ಕಾರದ ಗಂಭೀರೆ.

ಈಗಾಗಲೇ ಗುಜರಾಯಿಸಿದ್ದ ಹಲವಾರು ಅರ್ಜಿಗಳ ಪೈಕಿ ಒಂದಕ್ಕೆ ಉತ್ತರವಾಗಿ ಬಂತೊಂದು ಸರ್ಕಾರಿ ಉದ್ಯೋಗಕ್ಕಾಗಿ ಸಂದರ್ಶನದ ಕಾರ್ಡು. ಜಿಲ್ಲೆಯ ಕೇಂದ್ರ ಸ್ಥಳದಲ್ಲಿ ಸಂದರ್ಶನ.

ಇವಳೊಂದಿಗೆ ಅದೇ ಖಾಸಗೀ ಸಂಸ್ಥೆಯಲ್ಲೇ ನೌಕರಿಗಿದ್ದ ಮಹೇಶನಿಗೂ ಅಪರ್ಣಾಗೆ ಬಂದ ಇಂಟರ್‌ವ್ಯೂಗೇ ಹಾಜರಾಗುವಂತೆ ಕರೆಕಾರ್ಡು ಬಂದಿತು.

ಮಧ್ಯಾಹ್ನ ಬಿಡುವಿನ ವೇಳೆಯಲ್ಲಿ ಇಂಟರ್‌ವ್ಯೂ ಪ್ರಸ್ತಾಪ ಬಂದು, ಆ ನಗರದಲ್ಲಿ ತನಗೆ ಪರಿಚಯಸ್ಥರು ಯಾರೂ ಇಲ್ಲವೆಂದು ತಿಳಿಸಿದಳು ಅಪರ್ಣಾ. ಬೆಳಿಗ್ಗೆ ಹೋಗಿ ಸಂಜೆ ವಾಪಸಾಗಬಹುದೆಂದೂ, ತಾನೂ ಅದೇ ಸಂದರ್ಶನಕ್ಕೆ ಹಾಜರಾಗಬೇಕಿರುವುದರಿಂದ ಯೋಚಿಸುವ ಅವಶ್ಯಕತೆಯಿಲ್ಲವೆಂದೂ ಧೈರ್ಯ ತುಂಬಿದ ಮಹೇಶ.

ಇದೇ ಅಂದಾಜಿನಲ್ಲಿ ಸಂದರ್ಶನಕ್ಕೆಂದು ತೆರಳಿದ ಅಪರ್ಣಾಳ ಅಸಹಾಯ ಪರಿಸ್ಥಿತಿಯ ದುರ್ಲಾಭ ಪಡೆದ ಮಹೇಶ.

ನಂತರ ಇಬ್ಬರ ಕುಟುಂಬದವರ ಅನುಪಸ್ಥಿತಿಯಲ್ಲಿ ಶ್ರೀ ಧರ್ಮಸ್ಥಳ ಕ್ಷೇತ್ರದಲ್ಲಿ ಅಪರ್ಣಾ, ಮಹೇಶ ರೀರ್ವರೂ ಸತಿಪತಿಗಳಾದರು.

ದಿನಕಳೆದಂತೆ ಅಪರ್ಣಾಳ ತವರಿನವರು ಇವರ ಮನೆಗೆ ಬಂದು ಹೋಗತೊಡಗಿದರೂ, ಮಹೇಶನ ಮನೆಯವರ ಸುಳಿವೇ ಇಲ್ಲವಾಯಿತು. ತಮ್ಮ ಮದುವೆ ವಿಷಯ ಅವರಿಗೆ ತಿಳಿದಿದೆಯೋ ಇಲ್ಲವೋ ಎಂಬ ಸಂಶಯ ಬಂದರೂ ಸಹ, ಒಮ್ಮೆ ಜಾರಿದ ತನ್ನ ಬಾಳು ಇದ್ದುದರಲ್ಲಿ ಮಧ್ಯಸ್ಥಿಕೆಯಾಯಿತೆಂಬ ಸಮಾಧಾನ ಹೊಂದಿದಳು ಅಪರ್ಣಾ. ಈ ಮಧ್ಯೆ ಮಹೇಶನಿಗೆ ಸರ್ಕಾರಿ ನೌಕರಿಯೂ ದೊರೆಯಿತು.

ಬಾಣಂತನಕ್ಕೆಂದು ಅಪರ್ಣಾ ತವರಿಗೆ ಹೋದಳು. ಮಗು ಹುಟ್ಟಿದ ನಂತರ ತಿಂಗಳವರೆಗೆ ತಪ್ಪದೆ ಬರುತ್ತಿದ್ದ ಮಹೇಶ ಎರಡು ತಿಂಗಳುಗಳಾದರೂ ಬಾರದೇ ಇದ್ದುದರಿಂದ ಆತಂಕಗೊಂಡ ಅಪರ್ಣಾ ಬರೆದ ಪತ್ರಗಳೊಂದಕ್ಕೂ ಉತ್ತರವೇ ಇಲ್ಲವಾಯಿತು.

ಮಗುವಿಗೆ 6 ತಿಂಗಳಾದ ನಂತರ ಇನ್ನು ಸರಿಯಲ್ಲವೆಂದು ಅಪರ್ಣಾ ತನ್ನ ತಾಯಿ ಹಾಗೂ ಮಗುವಿನೊಂದಿಗೆ ಗಂಡನ ಮನೆಗೆ ಬಂದಳು. ಆಗ ಅವಳಿಗೆ ವಸ್ತುಸ್ಥಿತಿಯ ಅರಿವಾಯಿತು. ಮಹೇಶ ಮರು ಮದುವೆಯಾಗಿದ್ದ ತನ್ನ ತಂದೆ-ತಾಯಿ ತೋರಿದ ಹೆಣ್ಣಿನೊಂದಿಗೆ ಅಪರ್ಣಾ ಬಾಳಿಗೆ ಬರಸಿಡಿಲೆರಗಿತ್ತು.

ತನ್ನ ದುಃಖ, ಹಠ ಯಾವುದಕ್ಕೂ ಮಣಿಯದ ಮಹೇಶ ಎರಡನೇ ಹೆಂಡತಿಯೆದುರಿಗೆ ಅಪರಿಚಿತನಂತೆ ವರ್ತಿಸಿದಾಗ. ಸಹಜವಾಗಿಯೇ ಸ್ವಾಭಿಮಾನಿಯಾದ ಅಪರ್ಣಾ ತವರಿಗೇ ವಾಪಸಾದಳು. ಮಗನನ್ನು ತನ್ನ ಅಕ್ಕನ ಬಳಿ ಬಿಟ್ಟು ತಾನು ಕಾಪೌಂಡರ್ ಟ್ರೇನಿಂಗ್ ನೊಂದಿಗೆ ಸ್ಟಾಂಪ್ ಇತ್ಯಾದಿಗಳನ್ನು ಅಂಗಡಿಗೆ ಸಪ್ಲೈ ಮಾಡುವ ವ್ಯವಹಾರವನ್ನಿಟ್ಟುಕೊಂಡು ಜೀವನ ನಿಭಾಯಿಸತೊಡಗಿದಳು.

ಮಗ ಮಾತನಾಡಲು ತೊಡಗಿ ಅಪ್ಪನ ಬಗ್ಗೆ ಕೇಳುವಂತಾದಾಗ, ಮಗನ ಮುದ್ದು ಮಾತು ಕೇಳಿಯಾದರೂ ಮಹೇಶನ ಮನಸ್ಸು ಪರಿವರ್ತನೆ ಆದೀತೇನೋ ಎಂಬ ಆಸೆಯಿಂದ ಮಹೇಶನೆಡೆಗೆ ಹೋದಳು.

ಎರಡನೇ ಹೆಂಡತಿ ಹೆರಿಗೆಗಾಗಿ ತವರಿಗೆ ತೆರಳಿದ್ದಳು. ಈ ಬಾರಿ ಮಹೇಶ ಅಪರಿಚಿತನಂತೆ ವರ್ತಿಸದಿದ್ದರೂ ಸಹ, ತನ್ನ– ಅಪರ್ಣಾಳ ಮದುವೆ ವಿಷಯ ಅವನ ಅಪ್ಪ ಅಮ್ಮನಿಗೆ ತಿಳಿಯದೆಂದೂ ಇನ್ನು ಈ ಕಡೆ ಅಪರ್ಣಾ ಬರಕೂಡದೆಂದೂ ಮಗುವಿನ ಭವಿಷ್ಯದ ಬಗ್ಗೆ ಪ್ರಶ್ನಿಸಿದ ಅಪರ್ಣಾಗೆ ಹೊಡೆತಗಳೇ ಉತ್ತರವಾಯಿತು.

ಮೈಮೇಲಿನ ಹೊಡೆತಕ್ಕಿಂತಲೂ ಹೆಚ್ಚಾಗಿ ಮನಸ್ಸಿಗಾದ ನೋವಿನಿಂದ ರಾತ್ರಿಯೆಲ್ಲಾ ಒದ್ದಾಡಿದ ಅಪರ್ಣಾ ಬೆಳಿಗ್ಗೆ ಅವನ ಆಫೀಸಿಗೆ ಹೋಗಿ ಮೇಲಧಿಕಾರಿಗಳಲ್ಲಿ ವಸ್ತು ಸ್ಥಿತಿಯನ್ನು ವಿವರಿಸಿದಳು. ಮೃದು ಹೃದಯದ ಅಧಿಕಾರಿ ಮಹೇಶನಿಗೆ ಬುದ್ಧಿ ಹೇಳಿ, ಅಪರ್ಣಾ ಮತ್ತು ಮಗನ ಕೈಬಿಡಬಾರದೆಂದು ಎಚ್ಚರಿಕೆ ಇತ್ತರೂ ಅವರೆದುರಿಗೆ ಒಪ್ಪಿದಂತೆ ನಟಿಸಿದ ಮಹೇಶ, ಅಪರ್ಣಾಳನ್ನೂ ಒಳ್ಳೆಯ ಮಾತುಗಳಿಂದ ರಮಿಸಿ, ತನಗೆ ಪಶ್ಚಾತ್ತಾಪವಾಗಿದೆಯೆಂದೂ, ತಾನು ಬೇರೊಂದು ಮನೆ ಮಾಡಿ ಅವಳನ್ನು ಕರೆತರುವುದಾಗಿಯೂ ಅಲ್ಲಿಯವರೆಗೂ ಅಪರ್ಣಾ ತವರಿನಲ್ಲಿ ಇರಬೇಕೆಂದೂ ಒಪ್ಪಿಸಿದ.

ಮಹೇಶನಿಗೆ ಮತ್ತೊಂದು ಅವಕಾಶವನ್ನು ನೀಡಿ ನೋಡೋಣವೆಂದು ಒಪ್ಪಿದ ಅಪರ್ಣಾ ಮಗನೊಂದಿಗೆ ತವರಿಗೇ ವಾಪಸಾದಳು.

ಆದರೆ ಅಲ್ಲಿಂದ ಮುಂದೆ ತಿಂಗಳುಗಳು ಉರುಳಿದರೂ ತನ್ನ ಪತ್ರಗಳೊಂದಕ್ಕೂ ಉತ್ತರ ಬಾರದಿದ್ದಾಗ, ಪುನಃ ಮಹೇಶನ ಆಫೀಸಿನಲ್ಲಿ ವಿಚಾರಿಸಲು ತಿಳಿಯಿತು, ಮಹೇಶ ಅಲ್ಲಿಂದ ವರ್ಗಾಯಿಸಿಕೊಂಡು ಹೋಗಿದ್ದಾನೆಂದು.

ದುಃಖತಪ್ತೆ ಅಪರ್ಣಾಗೆ' ಮಹೇಶನಂತಹ ಹೀನ ವ್ಯಕ್ತಿಯ ಬಗ್ಗೆ ಜಿಗುಪ್ಸೆ ಮೂಡಿತು. ಅಲ್ಲದೆ ಇನ್ನು ಅವನನ್ನು ಬಲವಂತಪಡಿಸುವಲ್ಲಿ ಅರ್ಥವಿಲ್ಲವೆಂದು ಅರಿವಾಯಿತು.. ಹೇಗೋ ಮಗನನ್ನು ಸಾಕಿ ಮುಂದೆ ತರುವ ಏಕೈಕ ನಿಶ್ಚಯದಿಂದ ಭವಿಷ್ಯದ ಬಗ್ಗೆ ಚಿಂತಿಸುತ್ತಾ ವಾಪಸಾದಳು.

ವಿದ್ಯಾವಂತೆಯಾದ ಆದರ್ಶಗಳನ್ನು ನಂಬಿದ ಅಪರ್ಣಾಳಂತಹ ಸಂಸ್ಕಾರಯುತ ಹೆಣ್ಣನ್ನು ಪರಿಸ್ಥಿತಿಯ ದುರ್ಲಾಭ ಪಡೆದು, ನಡುನೀರಿನಲ್ಲಿ ಕೈಬಿಟ್ಟು ತಾನು ಮಾತ್ರ ನಿಶ್ಚಿಂತೆಯಿಂದ ಸುಖ ಅನುಭವಿಸುತ್ತಾ, ತನ್ನಿಂದ ಜೀವಮಾನಪರ್ಯಂತ ಕೊರಗಿನ ಅಗ್ನಿಯಲ್ಲಿ ಬೇಯುತ್ತಿರುವ ಹೆಣ್ಣಿನ ಬಗ್ಗೆ ಕಿಂಚಿತ್ತೂ ಯೋಚಿಸದ ಮಹೇಶನಂತಹ ಮನುಷ್ಯ ಪ್ರಾಣಿಗಳು, ವರದಕ್ಷಿಣೆಗಾಗಿ ಹೆಣ್ಣನ್ನು ಸೀಮೆಎಣ್ಣೆ ಹಾಕಿ ಸುಡುವ ಕೊಲೆಗಾರರಿಗಿಂತಲೂ ನೀಚತನದಲ್ಲಿ ಎಳ್ಳಿನಷ್ಟು ಕಡಿಮೆಯಿಲ್ಲ ಅಲ್ಲವೇ?

ನಳನಳಿಸಬೇಕಾದ ಹೂವನ್ನು ಸುಡುಬಿಸಿಲಲ್ಲಿರಿಸಿ ಬಾಡಿಸಿದ ಪೈಶಾಚಿಕ ಮನೋಭಾವದವರಿಂದ ಶೋಷಿಸಲ್ಪಟ್ಟ ಹೆಣ್ಣುಗಳ ಆಕ್ರಂದನ, ನೋವಿನ ದನಿಗೆ ಎಲ್ಲ ತಪ್ಪನ್ನೂ ಹೆಣ್ಣಿನ ಬೇಜವಾಬ್ದಾರಿತನದ ಪರಿಣಾಮವೆಂದೇ ತಿಳಿಯುವ, ಅವಳ ಬಗ್ಗೆ ಕಟೂಕ್ತಿಗಳನ್ನಾಡುವ ಸಮಾಜದಲ್ಲಿ ಸಾಂತ್ವನ ದೊರಕೀತೆ? ಇಂತಹ ಹೆಣ್ಣುಗಳ ಜೀವನ ನೆಮ್ಮದಿ ಕಾಣುವುದೆಂತು? ಈ ಪ್ರಶ್ನೆಗಳಿಗೆ ಉತ್ತರಿಸಬೇಕಾದವರು. ಉತ್ತರಿಸಬಲ್ಲವರು ಯಾರು?

●

# ಮಹಿಳೆ ಮತ್ತು ಹಿಂಸಾಚಾರ

## ಅತ್ಯಾಚಾರದ ಕಾನೂನಿನಲ್ಲಿ ಹಿಂಸಾಚಾರದ ಆಯಾಮಗಳು

- ನೀರಾ ಚಕ್ರವರ್ತಿ

ಮಹಿಳೆಯ ವಿರುದ್ಧ ನಡೆಯುವ ನಾನಾ ರೀತಿಯ ಹಿಂಸಾಚಾರಗಳು ಒಂದಕ್ಕೊಂದು ಎಷ್ಟೊಂದು ತಳುಕು ಹಾಕಿಕೊಂಡಿವೆಯೆಂದರೆ, ಇಂದು ನಾವು ಕಾನೂನು ವ್ಯವಸ್ಥೆ ಮತ್ತು ಇತರೆ ವಿಧಗಳಿಂದ ಪುರುಷರ ಕೋಟೆಗಳಲ್ಲಿ ಬಂಧಿಸಲ್ಪಟ್ಟ ಹಾದಿಗಳನ್ನು ಅರ್ಥಮಾಡಿಕೊಳ್ಳುವುದು ಗುರುತಿಸಿಕೊಳ್ಳುವುದು ಈ ದಿಸೆಯಲ್ಲಿ ಅವಶ್ಯಕವಾಗಿದೆ. ನಮ್ಮ ಆರ್ಥಿಕ ಮತ್ತು ಮಾನಸಿಕ ಅವಲಂಬನೆಗಳು ನಾವು, ನಮ್ಮ ಸಾಮಾಜಿಕವಾಗಿ ನಿರ್ಮಿಸಲ್ಪಟ್ಟ ಅನುಕೂಲತೆಗಳನ್ನೇ ನುಂಗಿ ಹಾಕುವ ಪುರುಷನಿಗೆ ಹೊಂದಿಕೊಳ್ಳುವಂತೆ, ಭಾವಾನಾತ್ಮಕವಾಗಿ ನಮ್ಮನ್ನು ಸಮರ್ಪಿಸಿಕೊಳ್ಳುವಂತೆ ಮಾಡಿವೆ.

ಒಂದು ಕಡೆ ಮಹಿಳಾ ಚಳುವಳಿ ತನ್ನ ಎಲ್ಲಾ ಭಿನ್ನತೆಗಳನ್ನೊಳಗೊಂಡು ಮಹಿಳೆಯ ಮೇಲಿನ ಪುರುಷರ ಹಿಂಸಾಚಾರ ಒಂದು ಸಾಮಾಜಿಕ ಸಮಸ್ಯೆ ಎಂಬುದರ ಬಗ್ಗೆ ಚರ್ಚೆಗಳನ್ನೆಬ್ಬಿಸುವುದರ ಮೂಲಕ ಸಮಾಜದಲ್ಲಿ ಪ್ರಜ್ಞೆ ಮೂಡಿಸಿದ ಯಶಸ್ಸಿಗೆ ಪಾತ್ರವಾಗಿದೆ. ಇನ್ನೊಂದು ಕಡೆ ದಿನ ನಿತ್ಯ ಸ್ತ್ರೀಯರ ಮೇಲೆ ನಡೆಯುವ ಪುರುಷರ ಹಿಂಸಾಚಾರವನ್ನು ನಮ್ಮ ಪತ್ರಿಕೆಯವರು ವರದಿ ಮಾಡುವ ರೀತಿ ಅವುಗಳನ್ನೇ ನಿಜ ಎಂದು ನಂಬುವಂತೆ ಮಾಡುತ್ತಿವೆ. ಹಿಂಸಿಸುವ ಪುರುಷನ ಸಂಬಂಧ ಕಡಿದುಕೊಂಡ ಮಾತ್ರಕ್ಕೇ ಅನೇಕ ಮಹಿಳೆಯರ ಹಿಂಸೆ ಕೊನೆಗೊಳ್ಳುವುದಿಲ್ಲ. ಹೀಗೊಬ್ಬರು ಹೇಳಿದಂತೆ "ಬಡತನದಂತೆ ಇದು ನಮ್ಮ ಜೊತೆ ಯಾವಾಗಲೂ ಇದ್ದೇ ಇರುತ್ತದೆ ಮತ್ತು ಇದು ನಾವು ನಡೆಸಬೇಕಾದ ನಿರಂತರ ಹೋರಾಟವಾಗಿರುತ್ತದೆ."

ಲೈಂಗಿಕ ಹಿಂಸೆ ಅದಕ್ಕೆ ಬಲಿಯಾದರ ಮೇಲೆ ಅತ್ಯಂತ ಶಕ್ತಿಯುತ ಪರಿಣಾಮ ಉಂಟುಮಾಡುತ್ತದೆಯಾದರೂ ಇದು ನ್ಯಾಯಾಲಯಗಳಿಂದ ಅತ್ಯಂತ ಕಡಿಮೆ ಅರ್ಥೈಸಲ್ಪಟ್ಟ ಅಪರಾಧ.

ಅಪರಿಚಿತನಿಂದ ನಡೆಯುವ ಲೈಂಗಿಕ ಹಿಂಸೆಯನ್ನು ಆಗಾಗ್ಗೆ ದೃಷ್ಟಾಂತವಾಗಿ ಬಳಸಲಾಗುತ್ತದೆ. ಆದರೆ ಜವಾಬ್ದಾರಿಯುತ ಸ್ಥಾನದಲ್ಲಿದ್ದ ಅಥವಾ ನಂಬಿಕೆಗೆ ಪಾತ್ರವಾದ ವ್ಯಕ್ತಿಯಿಂದ ನಡೆಯುವ ಹಿಂಸೆ ಅದಕ್ಕೆ ಗುರಿಯಾದವರಿಗೆ ಅಷ್ಟೇ ಭಯಾನಕವಾದುದಾಗಿರುತ್ತದೆ.

ನಂಬಿಕೆಯ ದ್ರೋಹ ಒಂದು ಪ್ರಮುಖ ಅಂಶ ಎಂದು ಲೈಂಗಿಕ ಹಿಂಸಾಚಾರದ ಪಿರ್ಯಾದುಗಳಲ್ಲಿ ಪರಿಗಣಿಸಲಾಗುವುದಿಲ್ಲ. ಆದರೆ ದ್ರೋಹಕ್ಕೆ ಬಲಿಯಾದವಳ ಸಮಾನ ಹಕ್ಕುಗಳು ಮತ್ತು ಶೋಷಣೆಗೆ ಒಳಗಾದ ಪ್ರಜ್ಞಾವಂತ ಸಮರ್ಥ ಸ್ತ್ರೀಯರೂ ಮುಚ್ಚಿ ಹಾಕಲ್ಪಡುತ್ತಾರೆ.

ಅಪರಾಧಿಗಳನ್ನು ರಕ್ಷಿಸಲಾಗುತ್ತದೆ, ಆಕ್ರಮಣಕ್ಕೆ ಗುರಿಯಾದ ಮಹಿಳೆಯನ್ನು ಅಸಹನೆಯಿಂದ ನೋಡಲಾಗುತ್ತದೆ ಮತ್ತು ಅವಳ ಮೇಲಿನ ಅತ್ಯಾಚಾರವನ್ನು ಸರಿಯಾಗಿ ಗುರುತಿಸದೆ ಅದಕ್ಕೆ ಪ್ರಾಮುಖ್ಯತೆ ಕೊಡದೆ ಅವಳನ್ನು ಮತ್ತಷ್ಟು ಶೋಷಿಸಲಾಗುತ್ತವೆ. ಇದೆಲ್ಲಕ್ಕೂ ಮೊದಲೇ ಅಪರಾಧದ ಬಗ್ಗೆ ದೂರು ಕೊಡುವಲ್ಲೇ ಅವಳನ್ನು ಅಧೈರ್ಯಗೊಳಿಸಲಾಗುತ್ತದೆ.

ಕಾತರೈನ್ ಮ್ಯಾರಸನ್ ಅವಳ Feminism unmodified, ಪುಸ್ತಕದಲ್ಲಿ ಹೇಳುತ್ತಾಳೆ. "Rape is defined according to what men think violates women". ಅಪರಾಧ ಮತ್ತು ಸಾಕ್ಷಿಗಳ ವಿಷಯದಲ್ಲಿ ವ್ಯಾಖ್ಯೆಗಳನ್ನು ನೀಡುವಾಗ ಸ್ತ್ರೀ-ಪುರುಷ ಎಂಬ ಭಿನ್ನತೆಯ ಪಾತ್ರದ ಮುಖ್ಯ ಗ್ರಹಿಕೆಯನ್ನು ಈ ಮಾತುಗಳು ನಮಗೆ ಕೊಡುತ್ತವೆ.

ಅತ್ಯಾಚಾರವನ್ನು ಪುರುಷರು ಅನಾದಿಕಾಲದಿಂದ ತಮ್ಮ ಶಬ್ದಗಳಲ್ಲಿ ಈ ರೀತಿ ವ್ಯಾಖ್ಯಾನಿಸಿದ್ದಾರೆ "ಕನ್ಯೆಯ ಅಥವಾ ಒಬ್ಬ ಪತ್ನಿಯ ಯೋನಿಯನ್ನು ಅಪರಿಚಿತ ಪುರುಷನ ಶಿಶ್ನವು ಪ್ರವೇಶಿಸುವುದು" ಮತ್ತು ಇದನ್ನು

ಪುರುಷನ ಆಸ್ತಿಯುನ್ನು ಹಿಂಸೆಗೆ ಒಳಪಡಿಸುವುದು ಎಂದು ತಿಳಿಯಲಾಗಿದೆ." ಆದ್ದರಿಂದ ಅತ್ಯಾಚಾರಕ್ಕೊಳಗಾದ ಮಹಿಳೆಯ ದೂರು ಸಾಕ್ಷಿಯ ಕಾನೂನು ಮತ್ತು ನ್ಯಾಯಾಂಗ ಅನುಮತಿಸಲ್ಪಟ್ಟ ವಿಧಿ ವಿಧಾನಗಳಿಂದ ತಳ್ಳಿಹಾಕಲ್ಪಡುತ್ತವೆ. ಸಮಾಜ ಎಲ್ಲಿ ವಿಫಲವಾಗಿದೆ ಎಂದರೆ ಅತ್ಯಾಚಾರವನ್ನು "ಪುರಷನ ಶಿಶ್ನದ ಪ್ರವೇಶ ಆತ ಅಪರಿಚಿತನೇ ಆಗಿರಲಿ ಕುಟುಂಬದ ಸದಸ್ಯನೇ ಆಗಿರಲಿ" ಎಂದು ಮಹಿಳೆಯ ದೃಷ್ಟಿಕೋನದಿಂದ ಪರಿಗಣಿಸುವಲ್ಲಿ

ಅತ್ಯಾಚಾರದ ಬಗೆಗಿನ ಇಂತಹ ಸಂಕುಚಿತ ಪುರುಷ ವ್ಯಾಖ್ಯಾನಗಳು ಪುರುಷರ ವಿಚಾರಗಳಿಗೆ ಮತ್ತಷ್ಟು ಬಲ ಕೊಡುವುದಲ್ಲದೆ ಅನೇಕ ಮಹಿಳೆಯರು ಅನುಭವಿಸಿದ 'ಲೈಂಗಿಕ ಹಿಂಸೆಗಳು' ಅಪರಾಧಗಳೆಂದು ಪರಿಗಣಿಸ ಲಾಗಿಯೇ ಇಲ್ಲ.

ಅತ್ಯಾಚಾರ ಮತ್ತು ಲೈಂಗಿಕ ಆಕ್ರಮಣಗಳ ವ್ಯಾಖ್ಯೆ ಆಗಾಗ್ಗೆ ಮಹಿಳೆ ಮತ್ತು ಮಕ್ಕಳು ಅನುಭವಿಸಿದ ಅಪರಾಧ ವನ್ನು ಒಳಗೊಳ್ಳುತ್ತವೆ. ಸಹಿಸಲಾಗದಂತಹ ಹಿಂಸೆ ಯನ್ನು ಮಾತ್ರ ಆಗಾಗ್ಗೆ ಪರಿಗಣಿಸಲಾಗುತ್ತದೆ. ಇದರ ಪರಿಣಾಮದಿಂದ ದೊರೆಯುವ ಒಂದು ಉದಾಹರಣೆ ನಮಗೆ ಈ ಶಬ್ದಗಳಲ್ಲಿ ಸಿಗುತ್ತದೆ. ಲೈಂಗಿಕ ಹಿಂಸೆ–ಮುಟ್ಟುವುದರಿಂದ ಅಥವ ನೋವು ಮಾಡುವುದರಿಂದ (hurt) ಅಥವಾ ಯಾತನೆಗೊಳಪಡಿಸುವುದರಿಂದ (harm) ಇಲ್ಲಿ hurt (ದೈಹಿಕ ಬಾಧೆಯನ್ನು ಉಂಟುಮಾಡುವುದು) ಮತ್ತು harm (ಶರೀರ ಕ್ರಿಯೆಗಳಲ್ಲಿ ಏರುಪೇರು ಉಂಟು ಮಾಡುವುದು) ಇವು ಇಂದಿನ ಕಾನೂನಿನಲ್ಲಿ ಅಪರಾಧದ ಆಕ್ರಮಣಕಾರಿ ಗುಣಗಳಿಗೆ ಮಾತ್ರ ಸೀಮಿತವಾಗಿವೆ ಮತ್ತು ಈಗಾಗಲೇ ನಿರ್ಲಕ್ಷಕ್ಕೆ ಒಳಗಾದ 'ನಂಬಿಕೆ ದ್ರೋಹ ದ ಪರಿಕಲ್ಪನೆಯಿಂದ ವಿಷಯವನ್ನು ಮತ್ತಷ್ಟು ದೂರ ಒಯ್ಯುತ್ತವೆ.

ಮಹಿಳೆಯ ಸೌಖ್ಯದ ಸಲುವಾಗಿ ನಂಬಿಕೆಗೆ ಅರ್ಹವಾದ ಸ್ಥಾನದಲ್ಲಿದ್ದವರು ವಿಶೇಷವಾದ ಜವಾಬ್ದಾರಿಯನ್ನು ತೆಗೆದುಕೊಳ್ಳಬೇಕೆಂಬುದನ್ನು ಮನಗಾಣ ವುದು ಇಲ್ಲಿ ಮುಖ್ಯವಾಗಿದೆ.

ಇದು ಮನೆಯಲ್ಲಿ ಮತ್ತು ನೌಕರಿ ಮಾಡುವ ಸ್ಥಳ ದಲ್ಲಿನ ಜವಾಬ್ದಾರಿಯುತ ವ್ಯಕ್ತಿಗಳನ್ನು ಒಳಗೊಳ್ಳುತ್ತದೆ. ಯಾವುದೇ ಸಂಸ್ಥೆ ಅಥವಾ ಕೆಲಸದ ಸದಸ್ಯತ್ವದಿಂದ ವಿಶೇಷ ಘನತೆಯನ್ನು ಹೊಂದಿದ ವ್ಯಕ್ತಿಗಳೂ ಲೈಂಗಿಕ ನಿಂದನೆಗೆ ಒಳಪಟ್ಟ ಘಟನೆಗಳಲ್ಲಿ ಆಗಾಗ್ಗೆ ಪರಿಶೀಲನೆ ಮತ್ತು ಆರೋಪಣೆಗಳ ನಿರ್ಬಂಧನೆಗಳಿಗೆ ಒಳಪಡದೆ ಅಬಾಧಿತರಾ ಗಿಯೇ ಉಳಿಯುತ್ತಾರೆ.

ದುರದೃಷ್ಟಕರ ಎಂದರೆ ದೈಹಿಕ ಆಕ್ರಮಣಗಳಿಂದುಂಟಾ ಗುವ ಹೊಡೆತ ಮತ್ತು ಇತರೆ ಕಣ್ಣಿಗೆ ಕಾಣುವ ಆಘಾತ ಗಳಿಗೆ, ಕಣ್ಣಿಗೆ ಕಾಣದಿರುವ ಅಧಿಕಾರದ ದುರುಪಯೋಗ ಅಥವ ನಂಬಿಕೆಯ ಸಂಬಂಧಕ್ಕೆ ದ್ರೋಹ ಬಗೆಯುವಂತಹ, ಆಗಾಗ್ಗೆ ಲೈಂಗಿಕ ಹಿಂಸೆಯನ್ನೂ ಒಳಗೊಳ್ಳುವಂತಹ ಹೆಚ್ಚು ಆಘಾತಕಾರಿ ವಿಷಯಗಳಿಗಿಂತ ಇದು ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುತ್ತದೆ. ಅಧಿಕಾರ ದುರುಪ ಯೋಗದ ಆಧಾರದ ಮೇಲೆ ವಿಧಿಸಲ್ಪಡುವ ಸರಕಾರದ ಶಿಕ್ಷೆ ದೈಹಿಕ ಹಿಂಸೆಯ ಪ್ರಯೋಗವನ್ನು ಉಪಯೋ ಗಿಸುವ ಆವಶ್ಯಕತೆಯಿಂದ ಅಪರಾಧಿಯನ್ನು ಕಾಪಾಡು ತ್ತದೆ. ಇದು ಬಹಳ ಜನ ತಪ್ಪಿತಸ್ಥರು ಬಹಳಷ್ಟು ನಂಬಿ ಕೆಗೆ ಅರ್ಹಸ್ಥಾನಗಳಲ್ಲಿರುವವರು ನ್ಯಾಯಾಲಯದಿಂದ ಖುಲಾಸೆ ಆಗುವಂತೆ ಅಥವಾ ಕೆಟ್ಟ ಮಾತುಗಳಿಗೆ ಗುರಿ ಯಾಗುವಂತೆ ಮಾಡುತ್ತದೆ. ಈ ಗ್ರಹಿಕೆಯಿಂದ 'ಹಿಂಸೆ ಮತ್ತು ಒಪ್ಪಿಗೆ'ಯನ್ನು ವ್ಯಾಖ್ಯಾನಿಸುವುದು ನಂಬಿಕೆಗೆ ದ್ರೋಹ ಬಗೆಯುವ ಲೈಂಗಿಕ ಅಪರಾಧಗಳನ್ನೂ ಮುಚ್ಚಿ ಹಾಕುತ್ತದೆ ಮತ್ತು ಅಪರಾಧ ಎಸಗುವ ಅನೇಕರ ಮೇಲೆ ಸಂಪೂರ್ಣ ಕಾನೂನಿನ ಕ್ರಮವನ್ನು ಜಾರಿಗೊಳಿಸಲು ಸಾಧ್ಯವಾಗದಂತೆ ಅವರಿಗೆ ರಕ್ಷಾಕವಚವಾಗುತ್ತದೆ.

ಲೈಂಗಿಕ ಅಪರಾಧದ ಕೇಸುಗಳಲ್ಲಿ ನಂಬಿಕೆಗೆ ದ್ರೋಹ ಬಗೆದಿರುವುದನ್ನು ಗುರುತಿಸುವ ಅಸಮರ್ಥತೆಯೇ ಅನೇಕ ಸಾರಿ ನಿಖರತೆಯ ಕೊರತೆಯಿಂದಾಗಿ ಮತ್ತಷ್ಟು ಹೀನ ಸ್ಥಿತಿಯನ್ನು ತಲುಪಿದೆ. ಉದಾಹರಣೆಗೆ ಒಂದು ವಿಶೇಷ ಸರ್ವೆಯಲ್ಲಿ ಒಂದು ತಜ್ಞ ವರದಿ, ಒಂದು ಹುಡುಗಿ ಎರಡು ವರ್ಷಗಳ ಕಾಲ ಹಿಂಸೆಗೆ ಒಳಪಟ್ಟ ಬಗ್ಗೆ ವಿವರ ಗಳನ್ನು ನೀಡುತ್ತದೆ. ವಾಸ್ತವವಾಗಿ ಸೆರೆವಾಸದ ತೀರ್ಮಾ ನದ ಪ್ರಕಾರ ಹಿಂಸೆ 9 ವರ್ಷದ ಅವಧಿಯಲ್ಲಿ 3 ಹುಡುಗಿ ಯರನ್ನು ಒಳಗೊಂಡಿತ್ತು, ಅಲ್ಲದೆ ತಜ್ಞರ "ವಿಚಾರಣಾ ಧೀನ ಹುಡುಗಿ" ಅವಳು ಮೂರು ಅಥವ ಆರು ವರ್ಷ ದವಳಾಗಿರಲಿ "ಲೈಂಗಿಕ ಕ್ರಿಯೆಯನ್ನು ಸಂತೋಷ ಪಟ್ಟಿ ದ್ದಾಳೆ" ಎಂಬ ಆಘಾತಕರವಾದ ದೃಷ್ಟಿಕೋನವನ್ನು ಬೆಳಕಿಗ ತರುತ್ತಾರೆ. ಅಪರಾಧಿಗಳ ಅಭಿಪ್ರಾಯದಂತೆಯೇ

ಇರುವ ಈ ದೃಷ್ಟಿಕೋನ ಲೈಂಗಿಕ ಹಿಂಸೆಯ ಬಗೆಗಿರುವ ಅತ್ಯಂತ ಹೆಚ್ಚಿನ ತಾಳ್ಮೆ ಮತ್ತು ಅದರ ಧೃಢೀಕರಣ ಹಾಗೂ ಚಿಂತನೆಯ ರೀತಿಯನ್ನು ಬಯಲುಮಾಡುತ್ತದೆ. ಅಪರಾಧಿಯ ಹಿಂಸಾ ಪ್ರವೃತ್ತಿಯ ಬಗ್ಗೆ ದೊಡ್ಡ ಚರಿತ್ರೆಯೇ ದೊರೆತಿದ್ದರೂ, ತಜ್ಞರು "ಅವನು ವಿಕೃತ ಲೈಂಗಿಕ ಬಲಾತ್ಕಾರ ಮಾಡಿದ್ದಾನೆ ಎನ್ನುವುದಕ್ಕೆ ಯಾವ ಸಾಕ್ಷಿಯೂ ಇಲ್ಲ" ಎನ್ನುವುದನ್ನು ಉಳಿಸಿಕೊಂಡು ಬಂದಿದ್ದಾರೆ. ಮೂರು ಮತ್ತು ಆರು ವರ್ಷದ ಮಕ್ಕಳ ಹಿಂಸೆ 'ಲೈಂಗಿಕ ಸಂಬಂದ' ಎಂದು ವಿವರಿಸಲ್ಪಟ್ಟಿದೆಯೇ ಹೊರತು ವಿಕೃತ ನಡವಳಿಕೆಯ ಫಲ ಎಂದಲ್ಲ ಅಲ್ಲದೆ ಆತನ ಮೇಲೆ ಯಾವುದೇ ಕಾನೂನು ಕ್ರಮವು ಇರುವುದಿಲ್ಲ.

ಅತ್ಯಾಚಾರಕ್ಕೆ ಸಂಬಂಧಿಸಿದ ಕಾನೂನಿನಲ್ಲಿ ಭೌತಿಕವಾಗಿ ಆಗುವ ಗಾಯಗಳು ಮುಖ್ಯವಾಗುತ್ತವೆ. ಏಕೆಂದರೆ ಇವುಗಳ ಆಧಾರದ ಮೇಲೆಯೇ ಆಕೆಯ ವಿರೋಧ ಮತ್ತು ಅದು ಆಕೆಯ ಒಪ್ಪಿಗೆ ಇಲ್ಲದೆ ನಡೆದ ಬಲಾತ್ಕಾರ ಎಂಬುದನ್ನು ತೀರ್ಮಾನಿಸಲಾಗುತ್ತದೆ. ಇಲ್ಲಿರುವ ಐರನಿ ಎಂದರೆ ಬೇರೆ ಸಾಮಾನ್ಯ ಆಕ್ರಮಣಗಳನ್ನು ಗುರುತಿಸಲು ಉಪಯೋಗಿಸುವ ಆಧಾರಗಳನ್ನೇ ಇಲ್ಲಿಯೂ ಬಳಸುವುದು. ಇಲ್ಲಿ ನಂಬಿಕೆಯ ಸಂಬಂಧಗಳನ್ನು ದುರುಪಯೋಗ ಪಡಿಸಿಕೊಂಡಾಗ ಅದು ಯಾವುದೇ ಭೌತಿಕ ಗಾಯಗಳನ್ನು ಮಾಡದೆ ಆಕೆಯನ್ನು ಮಾನಸಿಕವಾಗಿ ಸಂಪೂರ್ಣ ಹಾಳು ಮಾಡಿರುವುದನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಅತ್ಯಾಚಾರಕ್ಕೆ ಒಳಗಾದ ಅನೇಕರು ಅವರ ಜೀವವೇ ಹೋದಂತಹ ಅನುಭವಕ್ಕೆ ಒಳಗಾಗಿದ್ದಾರೆ. ಕೆಲವರು ನಂಬಿಕೆಯನ್ನೇ ಕಳೆದುಕೊಂಡು ನಿದ್ರಾಹೀನ ಶೀಘ್ರ ಕೋಪದ ಸ್ಥಿತಿಯಿಂದಾಗಿ ಆತ್ಮಹತ್ಯೆ ಎಡೆಗೆ ಅಥವಾ ಹಾಸಿಗೆ ಹಿಡಿದು ಆಸ್ಪತ್ರೆ ಸೇರುವೆಡೆಗೆ ಎಳೆದೊಯ್ಯಲ್ಪಟ್ಟಿದ್ದಾರೆ. ಒಪ್ಪಂದದ ಮೇಲಿನ ಲೈಂಗಿಕ ಸಂಬಂಧಗಳಲ್ಲಿ ಭೌತಿಕವಾಗಿ ಗಾಯಗಳು ಇಲ್ಲದೇ ಇರುವುದನ್ನು ನ್ಯಾಯಾಲಯ ಉದಾಹರಿಸುತ್ತಾದರೂ ಲೈಂಗಿಕ ಆಕ್ರಮಣದ ಪಿರ್ಯಾದುಗಳಲ್ಲಿ ಇಂತಹ ತಪ್ಪು ರೀತಿಯ ಸಾಕ್ಷಿಯ ನಿರ್ವಹಣೆ ಎದುರುವಾದಿಯನ್ನು ಸಮಾನವಾಗಿ ಎತ್ತಿ ಹಿಡಿಯುತ್ತದೆ.

ವಿಪರ್ಯಾಸವೆಂದರೆ ಸಮಾನ ನಡವಳಿಕೆಯೇ ಒಪ್ಪಿಗೆ ಎಂಬ ತಪ್ಪು ಕಲ್ಪನೆಗೆ ಒಳಗಾಗಿದೆ. ಆದ್ದರಿಂದ ಲೈಂಗಿಕ ಆಕ್ರಮಣವನ್ನು ಒಪ್ಪಿಗೆಯಿಂದ ನಡೆದ ಲೈಂಗಿಕಕ್ರಿಯೆ ಎಂದು ಪರಿಗಣಿಸಲಾಗುತ್ತದೆ. ಈಗಾಗಲೇ ತಿಳಿದಂತೆ ಪುರುಷ ಶಕ್ತಿಯ ಅರಿವನ್ನು ಮಹಿಳೆಗೆ ಕೊಡಲು ಆತ ಭೌತಿಕವಾಗಿ ಯಾವ ಹೊಡೆತಗಳ ಪ್ರಯೋಗವನ್ನು ಮಾಡಲೇ ಬೇಕಾಗಿಲ್ಲ ಎಂದು ಕೆಲವು ಘಟನೆಗಳಿಗೆ ಒಳಗಾದ ಮಹಿಳೆಯರ ಅಭಿಪ್ರಾಯ.

ಆದರೂ ಕಾನೂನು ಇಂತಹ ಸನ್ನಿವೇಶಗಳಲ್ಲಿ ಮಹಿಳೆ ಬಲಾತ್ಕಾರದಿಂದ ಒಪ್ಪಿಸಲ್ಪಟ್ಟಿದ್ದಾಳೆ ಎಂದು ಅರ್ಥ ಮಾಡಿಕೊಳ್ಳುವಲ್ಲಿ ವಿಫಲವಾಗಿದೆ. ಇದರ ಜೊತೆಗೆ ನಂತರದಲ್ಲಿ ಲೈಂಗಿಕ ಹಿಂಸೆಗೆ ಬಲಿಯಾಗುವಿಕೆ ನ್ಯಾಯಾಂಗದಿಂದ ಮುಂದಿಡಲ್ಪಟ್ಟಿದೆ ಮತ್ತು ಹಿಂಸೆಗೆ ಒಳಗಾದವರ ಒಪ್ಪಿಗೆಯ ವಿಚಾರದ ಬಗ್ಗೆ ಪೂರಕವಾದುದು ಎಂದು ಮಂಡಿಸಲಾಗಿದೆ. ಕಾನೂನು ವ್ಯಕ್ತಿಯ ಪ್ರಭಾವದ ಬಲಪ್ರಯೋಗದಿಂದ ಒಪ್ಪಿಗೆಯನ್ನು ಪಡೆದಿರುವುದನ್ನು ಗುರುತಿಸಿದರೂ ರೂಢಿಯಲ್ಲಿ ಅದನ್ನು ಗುರುತಿಸುವುದು ಬಳಕೆಯಲಿಲ್ಲ.

ಅತ್ಯಾಚಾರಕ್ಕೆ ಬಲಿಯಾದವರು ಒಪ್ಪಿಗೆ ಕೊಡುವ ಬಗ್ಗೆ ಅಪನಂಬಿಕೆ ಎಲ್ಲಕಡೆಗೆ ಹರಡಿವೆ. ಆದರೆ ಅಪರಾಧಿ ತಾನು "ಪ್ರಾಮಾಣಿಕವಾಗಿ ಆಕೆ ಒಪ್ಪಿದ್ದಾಳೆ ಎಂದು ನಂಬಿದ್ದೆ" ಎನ್ನುವ ಎದುರು ವಾದವನ್ನು ನ್ಯಾಯಾಂಗದ ಮುಂದೆ ಇಟ್ಟಿದ್ದಾದರೆ ಅದು ನ್ಯಾಯಾಂಗದಲ್ಲಿ ಒಪ್ಪಿಗೆಯಾಗಲ್ಪಟ್ಟರೆ ಪ್ರಶ್ನಾತೀತವಾಗಿ ಉಳಿದುಬಿಡುತ್ತದೆ. ಇಂತಹ ಅನ್ಯಾಯದ ನಡವಳಿಕೆ ಮಾನವನ ಹಕ್ಕುಗಳನ್ನು ಸಂಪೂರ್ಣವಾಗಿ ತಳ್ಳಿಹಾಕುತ್ತವೆ.

ಮನೋರೋಗತಜ್ಞ ಮತ್ತು ಮನಃ ಶಾಸ್ತ್ರಜ್ಞರಂತಹ ತಜ್ಞರು ನ್ಯಾಯಾಂಗದ ಪರವಾಗಿ ಕೊಡುವ ಸಾಕ್ಷಿಗಳಿಗೆ ಪ್ರಾಮುಖ್ಯತೆ ಕೊಟ್ಟಿರುವುದನ್ನು ಅದರ ನಿಖರತೆಗಾಗಿ ಪ್ರಶ್ನಿಸಬೇಕು ಮತ್ತು ಆಧಾರಗಳ ಪರಿಶೀಲನೆ ನಡೆಯಬೇಕು. ಇದಕ್ಕೆ ಈ ಮೊದಲೇ ಹೇಳಿದಂತೆ ಕಾನೂನು ಕೈಚೆಲ್ಲಿದ್ದಾಗ ತಜ್ಞರು ಮೂರು ಮತ್ತು ಆರು ವರ್ಷದ ಮಕ್ಕಳು "ಲೈಂಗಿಕ ಆಕ್ರಮಣವನ್ನು ಸಂತೋಷಪಟ್ಟರು" ಎಂದು ವಿವರಿಸಿರುವುದು ಒಂದು ಉದಾಹರಣೆ.

ತಜ್ಞರಿಂದ ಉಪಯೋಗಿಸಲ್ಪಟ್ಟ ನಯವಾದ ಸುತ್ತಿ ಬಳಸಿದ ಭಾಷೆ ಅಪರಾಧದ ಪ್ರಮಾಣವನ್ನು ಕಡಿಮೆ ಮಾಡಲು ಸಹಾಯ ಮಾಡುತ್ತದೆ ಮತ್ತು ಅಪರಾಧಿಯ ಅಪಾಯವನ್ನು ಮರೆಸುತ್ತದೆ. ಬಹಳ ಸೂಕ್ಷ್ಮ ರೀತಿಯಲ್ಲಿ

ಲೈಂಗಿಕ ಆಕ್ರಮಣ ನಡೆಸುವ ಪುರುಷರನ್ನು 'ಅತ್ಯಲ್ಪ ಅಥವಾ ತಾತ್ಕಾಲಿಕ ವಿಕೃತತೆ' ಇರುವ ಗುಂಪಿಗೆ ಸೇರಿಸ ಲಾಗಿದೆ. ಬಹಳ ಸಾರಿ ಅಪರಾಧಿಯು ಸಮಾಜಸೇವೆಗೇ ಹೆಚ್ಚು ಪ್ರಾಮುಖ್ಯತೆ ಕೊಟ್ಟು ಅವನ ಅಪರಾಧವನ್ನು ಕಡಿಮೆ ಮಾಡಲು ಸಹಾಯ ಮಾಡಲಾಗುತ್ತದೆ. ಆತನ ಇತರೆ ಕ್ಷೇತ್ರಗಳಲ್ಲಿನ ಅದ್ಭುತವಾದ ನಡವಳಿಕೆಗೆ ಒತ್ತು ಕೊಡುವ ನ್ಯಾಯಾಂಗ ಅದಕ್ಕೆ ವಿರುದ್ಧವಾಗಿ ಅತ್ಯಾಚಾರಕ್ಕೆ ಬಲಿಯಾದವಳನ್ನು ಮತ್ತಷ್ಟು ಕೆಳಕ್ಕೆ ತಳ್ಳುವ ಅವಳ ಅವಗುಣಗಳನ್ನು ಎತ್ತಿತೋರಿಸುತ್ತದೆ.

ಮೊದಲನೇ ಹಂತದಲ್ಲಿ ಮಹಿಳೆಯರು ಶೋಷಿಸಲ್ಪಟ್ಟಿದ್ದಾರೆ ಮತ್ತು ಅವರ ಮೇಲೆ ನಡೆದ ಅತ್ಯಾಚಾರವನ್ನು ವರದಿ ಮಾಡುವಲ್ಲಿ ಪ್ರೋತ್ಸಾಹ ದೊರಕದವರಾಗಿದ್ದಾರೆ. ಪೋಲೀಸರು ತಮ್ಮ 'ಅನಿರ್ಬಂಧಿತ ಅಧಿಕಾರ'ವನ್ನು ಉಪಯೋಗಿಸಿ ಬಡ, ಅಸಹಾಯಕ, ಅಸಮರ್ಥ ಹೆಣ್ಣುಮಕ್ಕಳ ಫಿರ್ಯಾದುಗಳು ಮುಂದಕ್ಕೆ ಹೋಗದಂತೆ ತಡೆ ಹಿಡಿದುಬಿಡುತ್ತಾರೆ. ಜೊತೆಗೆ ಸಾಮಾನ್ಯವಾಗಿ ಅಸಹಾಯಕ ಹೆಂಗಸರು ಮತ್ತು ಮಕ್ಕಳನ್ನೇ ಅವರ ದೌರ್ಬಲ್ಯಗಳ ಕಾರಣದಿಂದ ಮೋಸ ಮಾಡಲು ಆಯ್ದುಕೊಳ್ಳಲಾಗುತ್ತದೆ. ಸರ್ವೆ ಮತ್ತು ಸಂಶೋಧನೆಗಳು ದೃಢೀಕರಣಗೊಳಿಸುವುದೇನೆಂದರೆ ಅನೇಕ ಜನ 'ಅತ್ಯಾಚಾರವನ್ನು ಅತ್ಯಾಚಾರವೆಂದು ಪರಿಗಣಿಸುವುದೇ ಇಲ್ಲ.' ಹೆಂಗಸರು ಮತ್ತು ಮಕ್ಕಳ ಆತ್ಮರಕ್ಷಣೆ ಹಕ್ಕು ಮತ್ತು ಸಮಾನ ಅನುಕೂಲತೆ ಹಾಗೂ ಕಾನೂನಿನ ರಕ್ಷಣೆಯ ಹಕ್ಕುಗಳು, ಜನಪ್ರಿಯ ತಪ್ಪು ಗ್ರಹಿಕೆಗಳು ಕಾನೂನಿನಲ್ಲೂ ಪ್ರತಿಬಿಂಬಿಸಲ್ಪಟ್ಟಾಗ ಗಂಭೀರವಾಗಿ ಪೂರ್ವ ಗ್ರಹಿಕೆಗೆ ಒಳಪಡುತ್ತವೆ. ಪ್ರಸ್ತುತ ಇರುವ ಅತ್ಯಾಚಾರಕ್ಕೆ ಸಂಬಂಧಿಸಿದ ಕಾನೂನಿನ ಪುನರ್ ರಚನೆಯಾಗಬೇಕು ಮತ್ತು ಲೈಂಗಿಕ ಆಕ್ರಮಣಕ್ಕೆ ಸಂಬಂಧಿಸಿದಂತೆ ಹೊಸ ಉಪಯುಕ್ತ ಮತ್ತು ಸೂಕ್ತವಾದ ಅನುಕೂಲತೆಗಳನ್ನು ಅಳವಡಿಸಬೇಕು. ಉದ್ದೇಶಿಸಲ್ಪಟ್ಟಿರುವ ಹೊಸ ಕಾನೂನು, ಲೈಂಗಿಕ ಆಕ್ರಮಣದ ಸಂಬಂಧದಲ್ಲಿ ಅಪರಾಧಿ ಆಯುಧ ಉಪಯೋಗಿಸುವಿಕೆ, ದೈಹಿಕವಾಗಿ ಗಾಯಗೊಳಿಸುವಿಕೆಗಳನ್ನು ಅಪರಾಧದ ಗಂಭೀರತೆಯನ್ನು ಹೆಚ್ಚಿಸುವ ಅಂಶಗಳನ್ನಾಗಿ ಪರಿಗಣಿಸಬೇಕು. ಇವುಗಳ ಜೊತೆಗೆ ಮುಖ್ಯವಾಗಿ ಬಹಳ ಸಾರಿ ಗುರುತಿಸಲ್ಪಡದೆ, ಪರಿಗಣಿಸಲಾಗದೆ ಉಳಿಯುವ ಹಿಂಸೆಗೆ ಬಲಿಯಾದವರನ್ನು ಶಾಶ್ವತವಾಗಿ ಹಾಳು ಮಾಡುವ ಅಧಿಕಾರದ ದುರುಪಯೋಗ ಮತ್ತು ನಂಬಿಕೆ ದ್ರೋಹಗಳನ್ನು ಪರಿಗಣಿಸಬೇಕು. ಇಲ್ಲಿ ಮುಖ್ಯವಾಗಿ ನೆನಪಿಡಬೇಕಾದ ಅಂಶವೆಂದರೆ ಸಮಾನತೆಯನ್ನು ತರಬೇಕಾದರೆ ಮಹಿಳೆ ಅನುಭವಿಸಿದ ಹಿಂಸೆಯ ನ್ಯಾಯವಾದಂತಹ ಗ್ರಹಿಕೆಗೆ ಮತ್ತು ನ್ಯಾಯವಾದ ಪ್ರತಿಕ್ರಿಯೆಗೆ ಪೂರಕವಾಗುವಂತಹ ಅತ್ಯುತ್ತಮ ಸಾಕ್ಷಿಯನ್ನು ಅಳವಡಿಸುವುದು ಅತ್ಯಂತ ಮುಖ್ಯ ಅಂಶವಾಗಿದೆ.

ಮಹಿಳೆಯರು ತಾವು ಜೀವಿಸುತ್ತಿರುವ ಲೈಂಗಿಕ ಹಿಂಸೆಯ ಪರಿಸರ ಮತ್ತು ಆಕ್ರಮಣದಿಂದ ಅವರ ಮೇಲಾಗುವ ಪರಿಣಾಮಗಳ ಅರಿವು ಅವರ ಅನುಭವಗಳಿಂದಲೇ ಅವರಿಗಿದೆ. ಆದರೂ ಸಹ ಮಹಿಳೆಯರು ಪ್ರಬಲವಾದ ಸಾಕ್ಷಿಗಳಾಗಿದ್ದರೂ ಬಹಳ ಸಾರಿ ಅವರ ಸಾಕ್ಷಿಗಳು ಬೆಲೆಯಿಲ್ಲದವುಗಳಾಗಿವೆ ಮತ್ತು ಕಡೆಗಣಿಸಲ್ಪಟ್ಟವುಗಳಾಗಿವೆ. ನ್ಯಾಯಾಲಯ ವ್ಯವಸ್ಥೆಯಿಂದ ತೆಗೆದುಹಾಕಲ್ಪಟ್ಟವುಗಳಾಗಿವೆ. ದುರದೃಷ್ಟಕರದಿಂದ ನಮ್ಮ ಕ್ರಿಮಿನಲ್ ನ್ಯಾಯಾಲಯ ವ್ಯವಸ್ಥೆಯಲ್ಲಿ ನಾವು ಎದುರಿಸುವ ಸಮಸ್ಯೆ ಎಂದರೆ ಅಪರಾಧಿಯ ಹಕ್ಕುಗಳನ್ನು ಸಮಾಜದ ಹಕ್ಕುಗಳಿಗೆ ಸಮಾನವಾಗಿ ನೋಡುವುದಾಗಿದೆ. ಸಂಪ್ರದಾಯಕವಾಗಿ ಸಮಾಜದಲ್ಲಿನ ಪ್ರಬಲ ಸಂಬಂಧ ನ್ಯಾಯತಕ್ಕಡಿ ಅಪರಾಧಿಯ ನವಿರಾದ ವಿಚಾರಣೆಯ ಮೂಲಕ ಅವನ ಕಡೆಗೆ ವಾಲುವಂತೆ ಮಾಡುತ್ತದೆ.

ಸಂಯುಕ್ತ ರಾಷ್ಟ್ರಗಳ "1948 universal declaration of human rights"ನಲ್ಲಿ ಕಾನೂನಿನ ಎದುರಿನಲ್ಲಿ ಸಮಾನತೆ ಮತ್ತು ಕಾನೂನಿನ ಸರಿಸಮಾನ ರಕ್ಷಣೆ ಅಲ್ಲದೆ ಜೀವಿಸುವ ಹಕ್ಕು ಮತ್ತು ಆತ್ಮರಕ್ಷಣೆಯ ಬಗ್ಗೆ ಒಂದು ಬದ್ಧತೆ ಇದೆ. ಈ ಘೋಷಣೆ ವ್ಯವಸ್ಥೆಯಲ್ಲಿ ಮತ್ತು ಪ್ರಕ್ರಿಯೆಯಲ್ಲಿ ಸಮಾನತೆ ಮತ್ತು ನ್ಯಾಯದ ಬಗ್ಗೆ ಹಿಂಸೆಗೆ ಬಲಿಯಾದವರನೇಕರ ಹೊಗಳಿಕೆಗೆ ಪಾತ್ರವಾದ ಹೊಸ ಪರಿಕಲ್ಪನೆಗಳನ್ನು ಹುಟ್ಟು ಹಾಕಿತು. ಲೈಂಗಿಕ ಆಕ್ರಮಣಕ್ಕೊಳಗಾದವರು ನಂಬಿಕೆ ದ್ರೋಹಕ್ಕೆ ಬಲಿಯಾಗಿದ್ದರೂ ಅವರ ಹಕ್ಕುಗಳನ್ನು ಮನಗಾಣುವುದು ಬಹಳ ನಿಧಾನ. ಸಮಾನತೆಯ ಹಕ್ಕು, ಕಾನೂನಿನ ರಕ್ಷಣೆ ಸಂವಿಧಾನದಲ್ಲಿ ಘೋಷಿಸಲ್ಪಟ್ಟಿದ್ದರೂ ಅವು ಅನೇಕ ಸಾರಿ ಅವರಿಗೆ ದೊರೆಯುವುದಿಲ್ಲ ಮತ್ತು ನಂಬಿಕೆ

ದ್ರೋಹಕ್ಕೆ ಒಳಪಟ್ಟು ಲೈಂಗಿಕ ಆಕ್ರಮಣಕ್ಕೆ ಬಲಿಯಾದ ಮಹಿಳೆಯರಿಗೆ ವಿಶೇಷವಾಗಿ ಅವು ಬಹಳ ದೂರ ಉಳಿಯುತ್ತವೆ. ಸಮಾನತೆಗೆ ಪ್ರಾಧಾನ್ಯತೆ ವ್ಯವಸ್ಥೆಯಲ್ಲಿ ಮತ್ತು ವ್ಯವಸ್ಥೆಯಿಂದ ಪ್ರತಿನಿಧಿಸಲ್ಪಟ್ಟಿರುವ ಆಸಕ್ತಿಗಳನ್ನು ಹಕ್ಕುಗಳನ್ನು ಸಮತೋಲಗೊಳಿಸುವ ಬಗ್ಗೆ ದೃಢೀಕರಣ ಕೊಡುತ್ತದೆ.

ಮಹಿಳೆ ಆಕ್ರಮಣಕ್ಕೆ ಒಳಗಾಗಿ ಆಘಾತಕ್ಕೊಳಗಾಗ ಬೇಕಾದ ಕಾರಣ ಆಕೆ ಯಾವಾಗಲೂ ಹೆದರಿಕೆ ಮತ್ತು ತಾನೂ ಸಂಪೂರ್ಣ ರಕ್ಷಿಸಿಕೊಳ್ಳಲಾರೆ ಎಂಬ ತಿಳುವಳಿಕೆಯಲ್ಲೇ ಜೀವಿಸುತ್ತಾಳೆ. ನಿರ್ಲಕ್ಷತನ ಮತ್ತು ಅನಿರ್ಬಂಧಿತ ಅಧಿಕಾರದ ಪ್ರಯೋಗವನ್ನು ಕಿತ್ತುಹಾಕಬೇಕು ಮತ್ತು ಆಧಾರಗಳ ಸ್ಪಷ್ಟೀಕರಣಕ್ಕೆ ಒತ್ತು ಕೊಡಬೇಕು. ಬದಲಾವಣೆಯ ಅವಶ್ಯಕತೆಯನ್ನು ಹತ್ತಿಕ್ಕಲಾಗುತ್ತಿದೆ. ಮತ್ತು ಕ್ರಿಮಿನಲ್ ನ್ಯಾಯಾಲಯ ವ್ಯವಸ್ಥೆಯಲ್ಲಿ ಸಮಾನತೆಯನ್ನು ಯಾವತ್ತೂ ಸಾಧಿಸಬೇಕಾದರೆ ಬದಲಾವಣೆ ಮೂಲಭೂತವಾಗಿ ಆಗಬೇಕು. ●

---

# ಪಥ

**ಲಲಿತಾಜ ಮಲ್ಲಾರ**

ಒಂದು ಫೈಲಿನ ಸಮಸ್ಯೆ ಸರಿಪಡಿಸುವುದರಲ್ಲೇ ಮಗ್ನಳಾಗಿದ್ದೆ. ಆಫೀಸಿನ ಒಳಗೆ ಏನು ನಡೆಯುತ್ತಿದೆ ಎಂಬ ಅರಿವು ಕೂಡ ನನಗಿರಲಿಲ್ಲ. ಸತೀಶನ ಕಾರಿನ ಶಬ್ಧಕೂಡ ನನ್ನ ಏಕಾಗ್ರತೆಗೆ ಭಂಗ ತಂದಿರಲಿಲ್ಲ. ಅವರು ಹತ್ತಿರ ಬಂದು :

"ಏನ್ ಮೇಡಂ ಎಂಥಹಾ ಅನ್ಯಾಯ ಮಾಡಿದ್ರಿ" ಎಂದಾಗ ವಾಸ್ತವಕ್ಕೆ ಬಂದು ಗಾಬರಿಯಲ್ಲಿ.

"ನಾನೇನು ಮಾಡಿದೆ" ಎಂದು ಕೇಳಿದೆ. ಅಷ್ಟರಲ್ಲಿ "ಕರ್ತವ್ಯನಿರತರೆಂದರೆ ಇವರಪ್ಪ ನಾವೆಲ್ಲ ಅಷ್ಟೋತ್ತಿಂದ ಅದೇ ಸುದ್ದಿ ಮಾತಾಡುತ್ತಿದ್ದೇವೆ, ಆದರೂ ಗೊತ್ತಿಲ್ಲ ಅಂದರೆ ಆಶ್ಚರ್ಯ !" ಕ್ಲಾರ್ಕರಾಮಚಂದ್ರ ಹೇಳಿದಾಗ ಚಕಿತಳಾಗಿ ಅವರನ್ನೇ ನೋಡಿದೆ.

"ಇವರ ಈ ಸಿನ್ಸಿಯಾರಿಟಿಗೆ ಕಣ್ರಿ ನಾನು ಮೆಚ್ಚಿರುವುದು". ಸತೀಶ ಹೇಳಿದಾಗ ಬೆಚ್ಚಿಬಿದ್ದೆ. ಭೂಮಿ, ಬಾನುವಿನ ಅಂತರವಿರುವ ನಮ್ಮಲ್ಲಿ ಮೆಚ್ಚಿಕೆಯ ಮಾತು! ಇದಕ್ಕೇ ಇರಬೇಕು ತುಂಬ ಸಮಯದಿಂದ ಕೆಲಸವಿಲ್ಲದಿದ್ದರೂ ಬ್ಯಾಂಕಿಗೆ ಬಂದು ಹರಟೆ ಹೊಡೆಯುತ್ತ ಹೊತ್ತು ಕಳೆಯುವುದು, ಆದರೂ ಅದನ್ನು ಕೇಳಿಸಿ ಕೇಳದವಳಂತೆ.

"ಯಾವ ವಿಷಯದಲ್ಲಿ ನನ್ನಿಂದ ಅನ್ಯಾಯವಾಗಿದೆ ಹೇಳಿ." ಎಂದೆ.

"ನಿಮ್ಮ ದತ್ತು ಪುತ್ರಿಯ ಅಪ್ಪನ ಕೊಲೆ ಮಾಡಿದಿರಲ್ಲ,"

ಸತೀಶರೇ ನಾಲಿಗೆ ಬಿಗಿ ಹಿಡಿದು ಮಾತಾಡಿ, ಶ್ರೀಮಂತಿಕೆಗೆ ತಕ್ಕದಾದ ಘನತೆಯನ್ನು ಬೆಳೆಸಿಕೊಳ್ಳಿ ಹುಚ್ಚರಂತೆ ಮಾತಾಡಬೇಡಿ"

ಸಿಟ್ಟಿನಲ್ಲಿ ಮೈಯೆಲ್ಲಾ ನಡುಗಿ ಬಿಟ್ಟಿತು. ಪ್ರೇಮಕ್ಕೆ ನಾಂದಿ ಹಾಡಲು ಇಂಥಹ ಹುಡುಗಾಟದ ಮಾತೇಕೆ ? ಅಲ್ಲದೇ ಕೊರಗನ ಮಗಳನ್ನು ದತ್ತು ತೆಗೆದುಕೊಂಡು ವಿದ್ಯೆ ಕಲಿಸುವ ವಿಷಯದಲ್ಲಿ ಹಗುರವಾಗಿ ಮಾತಾಡಿ ನಗುವುದನ್ನು ಎಷ್ಟೋ ಬಾರಿ ಕೇಳಿದ್ದೇನೆ, ಆದರೂ ನನ್ನ ಆದರ್ಶಕ್ಕೆ ಧಕ್ಕೆ ಬಾರದಿದ್ದರಾಯ್ತು ಎಂದು ಅವರ ಮಾತನ್ನು ಹಗುರವಾಗಿ ತೆಗೆದುಕೊಂಡಿದ್ದಕ್ಕೆ, ಈಗಿಷ್ಟು ಮೀರಿ ಮಾತಾಡುವುದೇ ಹರಿಜನಳಾದ ಈ ಮಗಳನ್ನು ದತ್ತು ತೆಗೆದುಕೊಂಡು ವಿದ್ಯೆ ವಿನಯ, ಸ್ವಚ್ಛತೆ ಸಂಸ್ಕಾರಗಳನ್ನು ಮೈಗೂಡಿಸಿ ಮೇಲ್ಜಾತಿಯ ಹೆಣ್ಣಿಗಿಂತಲೂ ಹೆಚ್ಚಿನ ಪ್ರತಿಭೆಯನ್ನು ಕಾಣುವಾಗ ನನ್ನ ಆತ್ಮ ಅತ್ಯಾನಂದಗೊಳ್ಳುತ್ತದೆ. ಅದೇನು ಗೊತ್ತು ಈ ಹುಚ್ಚರಿಗೆ ಹೃದಯ ಸ್ಪಂದನವಿಲ್ಲದ ಈ ಶ್ರೀಮಂತನಿಗಿಂತಲೂ ಬ್ಯಾಂಕಿ

ನಿಂದ್ಲೆ ಸಾಲ ಪಡೆದು, ಬಾಡಿಗೆಗೆ ಕಾರು ಓಡಿಸಿ, ಮರ್ಯಾದೆಯಿಂದ ಬಾಳುತ್ತಿರುವ ಸ್ವಾಭಿಮಾನಿ ಕೊರಿಯನ್. ಎಷ್ಟೋ ವಾಸಿ.

ನಾನು ದತ್ತು ತೆಗೆದುಕೊಂಡಾಗ, ಎಲ್ಲರೂ ಅವಹೇಳನ ಮಾಡಿ ನಕ್ಕರೆ ಅವರೊಬ್ಬರೇ ನನ್ನನ್ನು ಅಭಿನಂದಿಸಿ ಸ್ಫೂರ್ತಿಯನ್ನಿತ್ತವರು, ಆದರೂ ಒಂದು ಪ್ರಶ್ನೆಯನ್ನು ಕೇಳಿಯೇ ಬಿಟ್ಟರು.

"ಅಲ್ಲಾ ಮೇಡಂ ಆ ಕುಡುಕ ಕೊರಗನ ಮಗಳನ್ನು ಬಿಟ್ಟರೆ ಬೇರ್ಯಾರು ನಿಮಗೆ ಸಿಕ್ಕುತ್ತಿರಲಿಲ್ಲವೇ?" ಅವರ ಪ್ರಶ್ನೆಗೆ ನಗು ಬಂತು. ಇಂತಹ ತಿರಸ್ಕಾರವನ್ನು ಈಗಲೇ ಮೆಟ್ಟಿಹಾಕಬೇಕೆಂದು ಹೇಳಿದೆ.

"ನಾನು ಯಾರು ಎಂಬುದು ಸ್ಪಷ್ಟವಾಗುವವರೆಗೂ ಈ ಗೊಂದಲ ತಪ್ಪಿದ್ದಲ್ಲ. ಆತ್ಮವತ್ ಸರ್ವಭೂತಾನಿ ಎಂಬುದು ಅನುಭವ ಗಮ್ಯವಾಗುವವರೆಗೂ ಇದೇ ಪ್ರಶ್ನೆ ಏಳುತ್ತದೆ, ಶ್ರೇಷ್ಠ ಎಂಬುದು ಸರ್ವವ್ಯಾಪ್ತಿಯಾದ ಆತ್ಮನೆ, ಅದರ ಮೇಲೆ ಮೇಲು-ಕೀಳು ಬಡವ-ಬಲ್ಲಿದನೆಂಬ ಸಂಕುಚಿತ ಪೊರೆ ಆವರಿಸಿಕೊಂಡಿದೆ, ಎಂದು ಅರಿತರೆ, ಪ್ರಾಪಂಚಿಕ ಆಲೋಚನೆ ವರ್ಣಬೇಧಕ್ಕೆ ಅನುವು ನೀಡುವುದಿಲ್ಲ. ಅದೇ ಬ್ರಹ್ಮಜ್ಞಾನ. ಸಕಾಲಕ್ಕೂ ಮೂಲಕಾರಣ ಎನ್ನುವುದೇ ಅದ್ವೈತ, ಇದು ತಿಳಿದವರಿಗೆ ಜಾತಿಯಲ್ಲಿ ನಂಬಿಗೆ ಇಲ್ಲ."

"ಏನ್ ಮೇಡಂ ನೀವು ವೇದಾಂತ ಬೋಧಿಸುತ್ತೀರಿ" ನನ್ನ ಮಾತು ವೇದಾಂತವೆನ್ನಿಸಿತೆ ಕೊರಿಯನ್, ಅಧಿಕಾರಸ್ಥರ ಸಾಮಾಜಿಕಜಾನ್ನತ್ಯ, ಆರ್ಥಿಕ ಆಧಾರಗಳ ಸಂಬಂಧವೇ ಇಲ್ಲದಂತೆ ಎಚ್ಚರದಲ್ಲೂ ಸುಷುಪ್ತಿಯಲ್ಲಿರುವಂತೆ ಅನುಭವಿಸುವುದೇ ಜ್ಞಾನಿಗೆ ಇರುವ ವಿಶೇಷ ಶಕ್ತಿ, ಅದನ್ನು ರೂಪಿಸಿಕೊಳ್ಳುವುದೆ ತಾತ್ವಿಕ ದೃಷ್ಟಿ. ಎಲ್ಲರಲ್ಲೂ ಇರುವುದು ಒಂದೇ ಆತ್ಮವಾದರೂ ಇತರರನ್ನು ಜಾತಿಯ ಆಧಾರದ ಮೇಲೆ ಆಧರಿಸುವ ಗುಣವೇಕೆ? ವ್ಯಕ್ತಿತ್ವಕ್ಕೇಕೆ ಬೆಲೆ ಕೊಡಬಾರದು, ಹಣವಂತರು, ವಿದ್ಯಾವಂತರು, ಇದೇ ತತ್ವವನ್ನು ಅಳವಡಿಸಿಕೊಂಡು ಜಾತಿ ಧರ್ಮಗಳ ದೂರೀಕರಿಸಿ, ಸಂಸ್ಕಾರವಂತ ಸಮಾಜವನ್ನು ರೂಪಿಸಲು ಯಾಕೆ ಶ್ರಮಿಸಬಾರದು? ಇದಕ್ಕೆ ಸಾಕ್ಷರತೆಯ ಡೊಂಬರಾಟದಲ್ಲಿ ಸರ್ಕಾರದ ಕೋಟಿಗಟ್ಟಲೆ ಅಗತ್ಯವಿದೆಯೇ? ಈಗ ನೋಡಿ ಧರ್ಮಸ್ಥಳದವರು ಹಿಂದುಳಿದ ಗ್ರಾಮಗಳನ್ನು ದತ್ತು ತೆಗೆದುಕೊಂಡು ಅಭಿವೃದ್ಧಿ ಪಡಿಸುತ್ತಿದ್ದಾರೆ. ಇದಕ್ಕೆ ಅವರ ಆರ್ಥಿಕ ನೆರವು ಅಲ್ಪವಾದರು. ಆತ್ಮವಿಶ್ವಾಸದ ಪ್ರತೀಕವು ಸ್ವಾವಲಂಬನೆಗೆ ಪ್ರೇರಣೆ. ಅದೇ ಭೂಮಿ, ಅದೇ ಜನ್ರು ಆದರೆ ಆರ್ಥಿಕ ಹಾಗೂ ಮಾನಸಿಕ ಸ್ಥಿತಿ ಸುಧಾರಣೆಯಾಗುತ್ತಿದೆಯೇ ಹೇಗೆ?... ಧರ್ಮಸ್ಥಳದವರಿಗೆ ಹಿಂದುಳಿದ ಹಳ್ಳಿಯೇ ಆಗಬೇಕಿತ್ತೇ ...? ಪೇಟೆಯನ್ನು ದತ್ತು ತೆಗೆದುಕೊಳ್ಳಬಹುದಿತ್ತು ಅಲ್ಲವೇ?"

"ಅಲ್ಲ ಮೇಡಂ ನೀವು ಏನು ತಿಳುವಳಿಕೆ ಇಲ್ಲದವರಂತೆ ಫೈಲಲ್ಲೇ ತಲೆ ತುರುಕಿಸಿ, ಲೆಕ್ಕದ ಮಾತಾಡುವ ನೀವು ಎಷ್ಟೊಂದು ಆಳವಾಗಿ ವಿಸ್ತಾರವಾಗಿ ಯೋಚಿಸಿ ಕಾರ್ಯ ಪ್ರವೃತ್ತರಾಗುತ್ತೀರಿ. ನಿಮ್ಮನ್ನು ಯಾರಾದರು ಮೆಚ್ಚಿಕೊಳ್ಳಲೇಬೇಕು. ಅಷ್ಟೇ ಅಲ್ಲ ನೀವು ಜೀವನದಲ್ಲಿ ಅಳವಡಿಸಿಕೊಂಡಿರುವ ಹೊಸ ತತ್ವಗಳ ಆಚರಣೆಯನ್ನು ನಮ್ಮ ಜೀವನದಲ್ಲೂ ಅಳವಡಿಸಿಕೊಳ್ಳಲೇಬೇಕು." "ಹಾಗಾದಂದು ಸಾಮಾಜಿಕ ಬದಲಾವಣೆಯೊಂದಿಗೆ ದೇಶದ ದಾರಿದ್ರ್ಯ, ಜಾತಿ-ಪಿಡುಗು, ಸಾಕ್ಷರತೆಯ ಸಮಸ್ಯೆ, ಎಲ್ಲವೂ ಪರಿಹಾರವಾದಂತೆ ಅಲ್ಲವೇ ಕೊರಿಯನ್."

"ಅದೇನೊ ಸರಿ ಆದರೆ ನಿಮ್ಮಲ್ಲಿರೋ ಆತ್ಮವಿಶ್ವಾಸ ಎಲ್ಲರಿಗೂ ಬರಬೇಕಲ್ಲ?"

"ಅದನ್ನು ರೂಢಿಸಿಕೊಳ್ಳಬೇಕು. ಯಾವುದು ತಾನಾಗೆ ಬರುವುದಿಲ್ಲ ಅನೈಕ್ಯತೆಯಿಂದ ಏಕತೆಗೆ,ಸಾಕಾರಾರಾಧನೆಯಿಂದ ನಿರಾಕಾರ ಭಾವನೆಗೆ ಎಡೆ ಮಾಡಿ ಸಾವಿರಾರು ವರ್ಷಗಳ ಹಿಂದೆಯೇ ಸಮಾಜದಲ್ಲಿ ಹುಟ್ಟಿಕೊಂಡ ವರ್ಣಬೇಧಗಳನ್ನು ಅಳಿಸಿ ಹಾಕುವ ತಾಕತ್ತು ಹೃದಯಾಂತರಾಳದಿಂದ ಮೂಡಿ ಬರಬೇಕು. ಅದು ಬಿಟ್ಟು ಓಟಿಗಾಗಿ, ಪಟ್ಟಕ್ಕಾಗಿ, ಜಾತಿ, ಜಾತಿಗಳ ಮಧ್ಯೆ ತಿಕ್ಕಾಟ ತರುತ್ತ ವೇದಿಕೆಯಲ್ಲಿ ನಿಂತು ಭಾಷಣದಲ್ಲಿ ಸುಧಾರಣೆಯ ತರುವ ರಾಜಕೀಯ ಪುಡಾರಿಗಳ ಹಿಂದೆ-ಮುಂದೆ ಯಾಕೆ ಸುತ್ತಬೇಕು, ಅವರನ್ನು ತುಚ್ಛೀಕರಿಸಿ ಇಂದಿನ ಯುವ ಜನತೆ ಉತ್ತಮ ಕೆಲಸಗಳಿಗೆ ಕಂಕಣ ಬದ್ಧರಾಗಬೇಕು. ಆಗ ಮಾತ್ರ ನಮ್ಮ ತಾಯಿ ಭಾರತಾಂಬೆ ಕಳೆದುಕೊಂಡದನ್ನೆಲ್ಲ ಮರಳಿ ಪಡೆಯಲು ಸಾಧ್ಯ."

"ಅಲ್ಲ ಮೇಡಂ ನಾನಿಲ್ಲೇ ಎದುರು ಕುಳಿತು ನಿಮ್ಮಲ್ಲಿ

ಕ್ಷಮೆ ಯಾಚಿಸಿದರೆ ನೀವ್ ಮಾತ್ರ ದೂರೆಲ್ಲೋ ಹೋಗಿ ಬಿಟ್ಟಿರಲ್ಲ." ಸತೀಶರ ಮಾತು ಮತ್ತೆ ಪ್ರಜ್ಞಾವಸ್ಥೆಗೆ ಎಳೆದಂತಾಯ್ತು.

"ಹೌದಲ್ಲ ಕೊಲೆಯ ವಿಷಯವೇನೆಂದು ತಿಳಿಯುವುದ ಬಿಟ್ಟು ನನ್ನ ಯೋಚನೆಯಲ್ಲೇ ಮೈಮರೆತು ಬಿಟ್ಟೆ ಕ್ಷಮಿಸಿ."

ನೀವು ಮೈಮರೆತು ಕುಳಿತಾಗ ಮನಸಿನಲ್ಲಿ ನಾನೆಲೆಸಿದ್ದರೆ ಧನ್ಯ."

ಛೇ, ಇವನೆಂತ ವ್ಯಕ್ತಿಯಪ್ಪ, ಶ್ರೀಮಂತಿಗೆ, ರೂಪ, ಯೌವನ, ವಿದ್ಯೆ, ಅಧಿಕಾರ, ಎಲ್ಲ ಇರುವವ ಒಂದು ಸಾಮಾನ್ಯ ನೌಕರಿಯಲ್ಲಿರುವ ಹೆಣ್ಣಿನ ಮುಂದೆ ಕುಬ್ಜ ನಾಗುತ್ತಿದ್ದಾನೆ. ಈ ಒಂದು ದೌರ್ಬಲ್ಯವೇ ಪುರುಷ ರನ್ನು ಅಧೋಗತಿಗಿಳಿಸುತ್ತಿರುವುದಲ್ಲವೆ ?

"ನಿನ್ನೆ ಮಧ್ಯಾಹ್ನ ಕೊರಗ ಇಲ್ಲಿಗೆ ಬಂದಿದ್ದನೆ ?"

"ಹೌದು ಬಂದಿದ್ದ"

"ನೀವು ಅವನಿಗೆ ಹಣ ಕೊಟ್ಟಿರಾ"

"ನಾನು ಹಣ ಕೊಟ್ಟಿರಬಹುದು. ಆದರೆ ನೀವೇನು ಪೋಲೀಸರಂತೆ ತನಿಕೆ ನಡೆಸುತ್ತಿದ್ದೀರಿ ? ನನ್ನ ಹಣದಿಂದ ಕೊರಗನಿಗೇನಾಯ್ತು ?

"ನೀವು ಕೊಟ್ಟ ಹಣದಿಂದ ಕಂಠಮಟ್ಟ ಸರಾಯಿ ಕುಡಿದು ಮನೆಗೆ ಹೊರಟ, ಮಳೆ ಜೋರಿತ್ತು, ಮೈ-ಮೇಲಿನ ಪ್ರಜ್ಞೆ ಇಲ್ಲದೆ ಹೊಳೆ ದಾಟಲು ಹೋಗಿ ನೀರು ಪಾಲಾದ."

"ಅಯ್ಯೋ ದೇವರೇ ! ಎಂತಹ ಅನ್ಯಾಯವಾಯ್ತು. ಹಣ ಕೊಡುವ ಬದಲು ಅಕ್ಕಿಯನ್ನೇ ತೆಗೆಸಿಕೊಟ್ಟಿದ್ದರೆ ಒಳ್ಳೆದಿತ್ತು."

"ಯಾವುದು ಕೊಟ್ಟರು ಒಂದೇ. ದುರಭ್ಯಾಸದ ದಾಸ ರಾದವರನ್ನು ಸುಧಾರಿಸುತ್ತೇವೆನ್ನುವುದು ನಾಯಿಬಾಲಕ್ಕೆ ಕೊಳವೆ ಇಟ್ಟಂತೆ"

"ಹೋಗಲಿ ಬಿಡಿ ನಿಮ್ಮಂತವರ ಸಹಕಾರವಿದ್ದರೆ ಹೆಡತಿ ಮಕ್ಕಳಾದರು ನೆಮ್ಮದಿಯ ಬಾಳ್ವೆ ನಡೆಸ ಬಹುದು. "ಸತೀಶರು ಹೇಳಿದಂತೆ ಇಂತವರನ್ನು ಸುಧಾರಣೆಗೆ ತರುವುದು ಕಷ್ಟವೇ. ನಿನ್ನೆ ಬ್ಯಾಂಕಿಗೆ ಬಂದು ನೂರು ರೂಪಾಯಿ ಸಾಲಕ್ಕೆ ಕಟ್ಟಿದ. ತಮ್ಮಲ್ಲಿ ನಂಬಿಗೆ ಉಳಿಸಿಕೊಳ್ಳುವುದಕ್ಕಾಗಿ ಹಣ ಕಟ್ಟಿದ್ದು.

ಇವತ್ತು ಮಕ್ಕಳೆಲ್ಲ ಉಪವಾಸ ಇರ್ತಾರೆ, ಒಂದಿಪ್ಪತ್ತು ರೂಪಾಯಿ ಇದ್ದರೆ ಕೊಡಿ ತಾಯಿ" ನಿಮ್ಮ ಹೆಸರ್ಹೇಳಿ ಊಟ ಮಾಡುತ್ತೇವೆ. ಎಂದು ನನ್ನ ಮನ ಕರಗುವಂತೆ ಯಾಚಿಸಿ, ಅದೇ ಹಣದಿಂದ ಸಾವನಪ್ಪಿದ ಕೊರಗನನ್ನು ದೂಷಿಸಬೇಕೆ ? ಅಥವ ವಿಧಿಯನ್ನೋ ? ಅಲ್ಲ ಕರುಣೆ ತೋರಲು ಹೊರಟು ಕೊಲೆಗಡಿಕೆ ಅನ್ನಿಸಿಕೊಂಡ ತನ್ನನ್ನೆ ? ಅಬ್ಬಾ ಮಾನವನ ಹುಟ್ಟು, ಸಾವೆ, ವಿಚಿತ್ರ ಇದೇ ಜೀವನ !

"ನಾನು ಹೇಳಲು ಬಂದ ವಿಷಯ ಮರೆತು ಏನೇನೊ ಮಾತಾಡಿದೆ, ನೀವೀಗ ನಮ್ಮಲ್ಲಿಗೆ ಬರಬೇಕು ಅನಿತರವರೆ"

"ನಾನು, ಈಗ ಇಂಪಾಜಿಬಲ್, ನಾನೀಗಲೇ ಕಮಲಳನ್ನು ಕರೆದುಕೊಂಡು ಅವಳ ತಂದೆಯ ಅಂತಿಮ ದರ್ಶನಕ್ಕೆ ಹೋಗಬೇಕು. ನಿಮ್ಮಲ್ಲಿಗೆ ಇನ್ನೊಂದು ದಿನ ಬರುತ್ತೇನೆ, ಸಾರಿ."

"ಆದಾಗುವುದಿಲ್ಲ ಇವತ್ತೇ ಬರಬೇಕು. ನನ್ನಕ್ಕಂದಿರಿಬ್ಬರು ಬಂದಿದ್ದಾರೆ, ತಾಯಿ ಸಹ ನಿಮ್ಮನ್ನು ನೋಡಲು ಇಚ್ಛಿಸುತ್ತಾರೆ. ನಿಮ್ಮನ್ನು ಕರೆದುಕೊಂಡೇ ಬರುತ್ತೇನೆಂದೇ ಮಾತು ಕೊಟ್ಟಿದ್ದೇನೆ."

"ಯಾರನ್ನು ಕೇಳಿ ಮಾತುಕೊಟ್ಟಿರಿ ? ನಾನು ತೋರಿದ ಕರುಣೆಯೇ ಕೊರಗನ ಸಾವಿಗೆ ಕಾರಣ ವಾಯ್ತೆನ್ನುವ ನೋವು ನನ್ನ ಎದೆಯಾಳದಲ್ಲಿ ದಹಿಸು ತ್ತಿದೆ. ಹಾಗಿರುವಾಗ ನಾನೀಗಲೇ ಅಲ್ಲಿಗೆ ಹೋಗುತ್ತೇನೆ". ಎಂದು ಹೊರಡಲನುವಾದೆ, ಸತೀಶರು ಕೂಡಲೆ ನನ್ನ ಕೈ ಹಿಡಿದು.

"ಇವತ್ತೊಂದು ದಿನ ನನ್ನ ಮಾತಿಗೆ ಬೆಲೆಕೊಟ್ಟು ಬರಲೇಬೇಕೆಂದರು." ನಾನು ನಿಸ್ಸಹಾಯಕಳಾಗಿ ಮ್ಯಾನೇಜರತ್ತ ನೋಡಿದೆ. ಅವರು ಹುಸಿ ನಗೆಯಲಿ "ಹೋಗಿ ಬನ್ನಿ ಅನಿತ" ಎಂದರು.

ಹಳ್ಳಿಯ ಬ್ರಾಂಚಲ್ಲಿ ಕೆಲ್ಸ ಮಾಡುವುದೆಂದರೆ ದನ್ಗಳ ದೊಡ್ಡಿಯಲ್ಲಿ ಕೂಡಿದಂತೆ ಎನ್ನಿಸಿತು ಆಕ್ಷಣ, ಯಾಕೆಂದರೆ ದೊಡ್ಡ ಸಿಟಿಯ ಬ್ಯಾಂಕಲ್ಲಾದರೆ ಹೀಗೆ ಕೈಹಿಡಿದು ಕೇಳಲಿತ್ತೆ! ಮ್ಯಾನೇಜರು ಇಷ್ಟು ಸುಲಭದಲ್ಲಿ ಒಪ್ಪಿಗೆ ಕೊಡುತ್ತಿದ್ದರೆ? ಅಷ್ಟರಲ್ಲಿ ದೇವರಂತೆ ಕೊರಿಯನ್ ಗಾಬರಿಲಿ ಬಂದು, "ಕಮಲ ಮಾರ್ಗದಲಿ ಅಳುತ್ತ ನಿಂತಿದ್ದಾಳೆ ಎಂದರು.

ಆ ಕೂಡಲೇ ಮ್ಯಾನೇಜರಿಗೆ ಕಣ್ಣಲ್ಲೇ ಹೋಗುತ್ತೇನೆಂದು ಹೇಳಿ ಹೊರಬಂದೆ, ಕೊರಿಯನ್ ಕಾರು ರೆಡಿಯಿತ್ತು. ಕಮಲಳನ್ನು ಕರೆದುಕೊಂಡು ಕೊರಗನ ಮನೆಗೆ ಹೋದಾಗ ಅವನ ಹೆಂಡತಿ ಮಕ್ಕಳ ರೋಧನ ಹೃದಯವನ್ನು ಕಲಕುತ್ತಿತ್ತು.

"ನನ್ನ ನೋಡಿ, "ಬಡವರ ಉದ್ಧಾರಕೆ ಪಣ ತೊಟ್ಟಿರಲ್ಲಮ್ಮ ಕುಡುಕ ಗಂಡನ ಒಳ್ಳೆಯ ದಾರಿಲ್ಲಿ ಸರಿ ದಾರಿಗೆ ತಂದು ಸುಧಾರಿಸು ಎಂದು ಬುದ್ಧಿ ಹೇಳಿದಿರಲ್ಲ ತಾಯಿ. ಈಗ ನೋಡಿ ಹೊಟ್ಟೆಗೆ ಹಿಟ್ಟಿಲ್ಲದಿದ್ದರು ಚಿಂತಿಲ್ಲ ಕುಡ್ತ ಬಿಡ್ಲಾರಂತ ನಿಮ್ಗೆ ಮೋಸ ಮಾಡಿ ಹೋದರಲ್ಲ ದೇವ್ರೆ !" ಎಂದು ಎದೆಗೆ ಲಬಲಬ ಬಡಿದುಕೊಂಡು ಅಳುವುದು ನೋಡಿದಾಗ ಅಪರಾಧೀ ಭಾವ ನನ್ನ ಮನದಲ್ಲಿ ಸುಳಿದು ಮರೆಯಾಯ್ತು.

"ನೋಡು ಬಿಡುಗು ನೀನೀಗ ಅತ್ತರೆ ಹೋದವ ಬರಲುಂಟೆ, ಮಕ್ಕಳನ್ನು ನೋಡು. ಅವರಿಗಾಗಿ ಧೈರ್ಯ ವಹಿಸಿ ಬದುಕನ್ನು ಎದುರಿಸಿ ಮಕ್ಕಳ ಭವಿಷ್ಯತ್ತು ರೂಪಿಸು. ಕಣ್ಣೀರೊಂದೇ ಹೆಣ್ಣಿನ ಜನ್ಮ ಸಿದ್ಧ ಹಕ್ಕಲ್ಲ. ಆತ್ಮ ವಿಶ್ವಾಸ ಹೊಂದಿದರೆ ಏನನ್ನು ಸಾಧಿಸುತ್ತಾಳೆಂದು ತೋರಿಸಿಕೊಡು, ನಿನಗೆ ಮಾರ್ಗದರ್ಶಕಳಾಗಿ ನಾನಿರುತ್ತೇನೆ" ಎಂದು ಧೈರ್ಯ ಹೇಳಿ ಮುಂದಿನ ಖರ್ಚಿಗೆ ಬೇಕಾದ ವ್ಯವಸ್ಥೆ ಮಾಡಿ ಬಂದೆ. ಕಾರಿಳಿದು ಕೊರಿಯನ್‌ಗೆ ಕೈ ಮುಗಿದು

"ನಿಮ್ಮ ಉಪಕಾರವನ್ನು ಮರೆಯಲಾರ" ಎಂದೆ.

"ಉಪಕಾರ ಸ್ಮರಣೆಯಿಂದ, ನೋವಿನ ಮಿಡಿತದಿಂದ, ಪ್ರೀತಿ ಹುಟ್ಟುವುದಿಲ್ಲ. ಮೊದಲ ನೋಟದಲ್ಲೇ ವ್ಯಕ್ತಿತ್ವವ ಮನವ ಮೀಟಿದಾಗ ಉಂಟಾಗುವುದೇ ಪ್ರೀತಿ, ಪ್ರೀತಿ ಎಂದರೆ ನಿಸ್ವಾರ್ಥದಿಂದ ಒಬ್ಬರಿಗೊಬ್ಬರು ಸಂಶಯ ಮಾಡುವುದೇ ಆಗಿರುತ್ತದೆ, ಗೊತ್ತೆ ಮೇಡಂ"

ಇದು ಮೂರನೇ ಶಾಕ್,

"ನೀವೇನು ಹೇಳುತ್ತೀರಿ ಕೊರಿಯನ್"

ಹೆದರಬೇಡ ನನ್ನ ಪ್ರೇಮ ಪರಿಶುದ್ಧವಾದದ್ದು. ನಿಮ್ಮಿಂದ ನಾನೇನು ಬಯಸುವುದಿಲ್ಲ ಬರುತ್ತೇನೆ." ಎಂದು ಕಾರ್ ಸ್ಟಾರ್ಟ್ ಮಾಡಿ ಹೊರಟೇ ಬಿಟ್ಟರು. ಅವರು ಹೋದ ಕಡೆ ನೋಡುತ್ತಾ, ಒಬ್ಬನ ಸಾವಿನ ಸಮಯದಲ್ಲಿ ಇಬ್ಬರ ಪ್ರೇಮಾಲಾಪನೆ ಹೇಗಿದೆ? ಮಾನವನ ವಿಕಾಸ ಪಥ! ಎಂದು ಯೋಚಿಸುತ್ತಾ ಬ್ಯಾಂಕಿನ ಹತ್ತಿರವಿದ್ದ ನನ್ನ ಸ್ಕೂಟರ್ ತೆಗೆದುಕೊಂಡು ಮನೆಯ ಕಡೆ ಹೊರಟೆ, ಮಳೆಗಾಲ ಮನೆ ಬಾಗಿಲಿಗೆ ವಾಹನ ಹೋಗುವುದಿಲ್ಲ. ಸಣ್ಣ ತೋಡೊಂದು ಅಡ್ಡವಾಗಿ ಹರಿಯುತ್ತದೆ. ಅಲ್ಲೇ ಇದ್ದ ಶೆಡ್ಡಿನಲ್ಲಿ ನಿಲ್ಲಿಸಿ ತಿರುಗಿ ನೋಡಿದಾಗ ಸತೀಶರ ಕಾರು ನಿಂತಿದೆ. ಆಶ್ಚರ್ಯವಾಯ್ತು ಮನೆಗೆ ಮೂರು ದೂರಕ್ಕೆ ನನ್ನಣ್ಣ ಹಾಗೂ ಸತೀಶರ ಮಾತು ಕೇಳಿಸುತ್ತಿದೆ.

"ಅಲ್ಲಿಗೆ ಹೋಗದಂತೆ ತಡೆಯಲು ಪ್ರಯತ್ನಪಟ್ಟೆ. ಆದರೆ ಈ ಕಾರ್ ಡ್ರೈವರ್ ಬಂದು ನನ್ನ ಪ್ಲಾನ್ನೆಲ್ಲ ಹಾಳುಮಾಡಿದ.

"ಅವನಿಗೊಮ್ಮೆ ಬುದ್ಧಿ ಬೇಳಬೇಕು. ನನ್ನ ತಂಗಿಯ ಮೇಲೆ ಅವನಿಗೆ ಇಷ್ಟು ಆಸಕ್ತಿ ಇವಳ ಹುಚ್ಚು ಆದರ್ಶಗಳಿಗೆ ರೆಕ್ಕೆ ಜೋಡಿಸುವ ಅವಿವೇಕಿ ಅವನು"

"ನಿಮ್ಮ ತಂಗಿಗೆ ಮೊದಲು ಬುದ್ಧಿ ಹೇಳಿ. ಆದರ್ಶಗಳು ನಕ್ಷತ್ರಗಳಿದ್ದ ಹಾಗೆ ದೂರದಿಂದ ನೋಡಲು ಮಾತ್ರ ಚೆಂದ. ಹತ್ತಿರ ಹೋದರೆ ಸಮಸ್ಯೆಗಳು ಅಪಾರ, ಅದಕ್ಕಿಂತಲೂ ವಾಸ್ತವತೆಯಲ್ಲಿ ಆದರ್ಶವನ್ನು ಕಾಣುವುದುತ್ತಮ."

"ಅವಳು ಯಾರ ಬುದ್ಧಿ ಮಾತನ್ನು ಕೇಳುವ ಸ್ಥಿತಿಯಲ್ಲಿಲ್ಲ. ಇಚ್ಛಿಸಿದ ಕಾರ್ಯ ಆಗಲೇಬೇಕು. ಅಂತಹ ಹಠವಾದಿ, ಅದಕ್ಕೆ ಸರಿಯಾಗಿ ದೈವ ಬಲವು ಇದೆ ಎನ್ನಬೇಕು ನನಗಿರುವುದೊಂದೇ ಭಯ. ಜಾತಿಗೆಡುತ್ತಾಳೊ ಎಂದು"

"ಅಂದರೆ ಏನು ವಿಷಯ"

"ಆ ಕಿಶ್ಚನನ್ನೆಲ್ಲಾದರೂ ಮದುವೆ ಮಾಡಿಕೊಂಡರೇ?"

"ಅಂಥದೇನಿಲ್ಲ ಬಿಡಿ" ನನ್ನ ರೂಪ ಶ್ರೀಮಂತಿಕೆಗೆ ಒಲಿದಿದ್ದಾಳೆ. ನಿಮ್ಮ ತಂಗಿ ಎಂಬ ಧೈರ್ಯವೇನೋ.

"ಅಜಲಳ ಮಗಳನ್ನು ಓದಿಸುವುದರಲ್ಲಿರೋ ಆಸಕ್ತಿ ನೋಡಿದರೆ! ಒಂದೊಂದು ದಿವಸ ರಜೆಯಲ್ಲಿ ಹೊಲೆ ಹೊಟ್ಟರೆಲ್ಲ ಮನೆ ತುಂಬ ಸೇರಿಕೊಂಡಿರುತ್ತಾರೆ. ಅವರಿಗೆಲ್ಲ ಅಕ್ಷರಭ್ಯಾಸ ಮಾಡಿಸುತ್ತ, ಹೊಲಿಗೆ, ಕಸೂತಿ ಕಲಿಸುವ ಹುಚ್ಚು, ಹೀಗಾದರೆ ಅವಳ ಮುಂದಿನ ಭವಿಷ್ಯ ಚುಕ್ಕಾಣಿ ಇಲ್ಲದ ನಾವೆ ಆಗುವುದರಲ್ಲಿ ಸಂದೇಹವಿಲ್ಲ"

ಅಣ್ಣನ ಮಾತು ಕೇಳಿ ಕಣ್ಣಲಿ ನೀರು ತುಂಬಿತು. ಚಿಕ್ಕಂದಿನಲ್ಲೇ ಎಲ್ಲರನ್ನು ಕಳೆದುಕೊಂಡು ನಾವಿಬ್ಬರೇ ಬಡತನದಲ್ಲಿ ಬದುಕಿನ ನೋವುಂಡು ಬೆಳೆದವರು,ಹಾಗಿದ್ದು ತಂಗಿಯು ಮನಸ್ಸನರ್ಥ ಮಾಡಿಕೊಂಡಿಲ್ಲ ಅಂದರೆ ?

ಏನಾದರಾಗಲಿ ಅಣ್ಣ ಹಾಗೂ ಅವನ ಗೆಳೆಯರ ದೃಷ್ಟಿಕೋನ ಬೇರೆ ಇರಬಹುದು. ಆದರೂ ಸ್ವಂತ ವೈಚಾರಿಕತೆ ಹಾಗೂ ವ್ಯಕ್ತಿತ್ವ ಹೊಂದಿದ ನನಗೆ ಅವರ ದೃಷ್ಟಿಕೋನದಲ್ಲಿ ಬದುಕನ್ನು ಒಪ್ಪಿಕೊಳ್ಳುವುದು ಸಾಧ್ಯವಿಲ್ಲ ಅನ್ನಿಸುತ್ತಿದೆ

ಕಮ್ಲಳ ತಂದೆಯು ಜೀವನ ದುರಂತವಾದರು, ಆ ಹೆಜ್ಜೆಯಲ್ಲಿ ನಾನು ವಿಫಲಳಾದರು ಅವನ ಮಗಳು ವಿದ್ಯಾವಂತಳಾಗಿ, ಉನ್ನತ ಭವಿಷ್ಯವನ್ನು ರೂಪಿಸಿಕೊಳ್ಳುವಲ್ಲಿ ಸಹಾಯ ಮಾಡಬೇಕೆನ್ನುವ ಛಲ ಹಾಗೂ ಕಮ್ಲಳಂತಹ ಇನ್ನಿತರ ಸಹಜೀವಿಗಳ ಏಳಿಗೆಗೆ ಸಹಕರಿಸುವುದರಲ್ಲೇ ನನ್ನ ಜೀವನ ಪಥದ ಸಾಫಲ್ಯತೆ ಅಡಗಿದೆ. ನನ್ನ ದಾರಿಯನ್ನು ನಾನು ಬಿಡಬಾರದು.

ಈ ಸಲ ಅಣ್ಣನ ಮದುವೆಯಾಗಿ ಅವನಿಗೊಂದು ನೆಲೆಯಾದರೆ, ನಾನು ವರ್ಗ ಮಾಡಿಸಿಕೊಂಡು ದೂರ ಹೋಗಬೇಕು. ಆಗ ಅಣ್ಣನಿಗೆ ಇಷ್ಟೊಂದು ಕಾಳಜಿ ಇರಲಾರದು. ಆದರೂ ಈ ಜಾತಿಗಳ ತಿಕ್ಕಾಟ ಹಣವಂತರ ಹಾರಾಟ, ದುರಭ್ಯಾಸಗಳ ದಾಸತ್ವ, ಇದೆಲ್ಲದರಿಂದ ಈ ಜನರಿಗೆಂದು ಮುಕ್ತಿ....?

ಅದಾದಂದು ತಮ್ಮಗಳ ಉದ್ಧಾರ, ಲೋಕೋದ್ಧಾರ ಎಂದು ತನಗೆ ತಾನು ಸಮಾಧಾನ ತಂದುಕೊಂಡು, ಅವರಿಬ್ಬರ ಕಣ್ಣಿಗೆ ಬೀಳದಂತೆ ವೈಮನಗಳ ಕೊಳೆಯನ್ನು ತೊಳೆದುಕೊಳ್ಳಲು ಸ್ನಾನದ ಮನೆಗೆ ತೆರಳಿದೆ.

●

REGD. NO. KRNA 271

# ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ

## "ಮದ್ಯಪಾನ ಮಾನವನ ಶತ್ರು"

ನಾಗರೀಕತೆ ಬೆಳೆದಂತೆ ಮದ್ಯಪಾನ ಮತ್ತು ಮಾದಕ ವಸ್ತುಗಳ ಸೇವನೆ ಜನರಲ್ಲಿ ಹೆಚ್ಚುತ್ತಿದ್ದು, ಇದರಿಂದ ಆರೋಗ್ಯವನ್ನು ಅಲ್ಲದೆ ಬಾಳನ್ನು ಹಾಗೂ ಇಡೀ ಕುಟುಂಬವನ್ನು ಬಡತನದ ಬೇಗೆಗೆ ತಳ್ಳಿ ತಾನೂ ನಾಶ ಹೊಂದಿ, ಕುಟುಂಬವನ್ನೂ ಹಾಳು ಮಾಡಿ ಸಮಾಜಕ್ಕೆ ಹೊರೆಯಾಗುತ್ತಿದ್ದಾರೆ. ಮದ್ಯವು ಕುಡಿಯುವವನನ್ನು ಅವರ ಕುಟುಂಬವನ್ನು ಹಾಳು ಮಾಡುತ್ತದೆ. ಯಾರು ಮದ್ಯಪಾನ ಮಾಡುತ್ತಾರೋ ಅವರೂ ಕೂಡ ಮದ್ಯ ಒಳ್ಳೆಯದೆಂದು ಹೇಳಲಾರರು. ತಮ್ಮ ತಪ್ಪು ಗ್ರಹಿಕೆಯಿಂದ ಚಟಕ್ಕೆ ಬಲಿಯಾಗಿ ಬಲಿಪಶುಗಳಾಗುತ್ತಿದ್ದಾರೆ. ಲೆಕ್ಕವಿಲ್ಲದಷ್ಟು ಜನ ಇದರ ಮತ್ತಿಗೆ ಬಲಿಯಾಗಿ ಬೀದಿಪಾಲಾಗಿದ್ದಾರೆ. ಕುಡಿತವು ಎಲ್ಲ ದುಶ್ಚಟಗಳ ಮೂಲವಾಗಿದ್ದು ಸರ್ವ ಸಮಸ್ಯೆಗಳ ಆಗರವಾಗಿದೆ. ಆರ್ಥಿಕವಾಗಿಯೂ, ಆಧ್ಯಾತ್ಮಿಕವಾಗಿಯೂ ಅಲ್ಲದೆ ಶಾರೀರಿಕವಾಗಿಯೂ ದಿವಾಳಿ ಮಾಡುವುದಲ್ಲದೆ ಜೀವಚ್ಛವವನ್ನಾಗಿ ಮಾಡಿ ನಿರರ್ಥಕ ಹಾಗೂ ನಿರುಪಯೋಗಿಯನ್ನಾಗಿ ಮಾಡಿ ಬಾಳನ್ನೇ ನರಕವನ್ನಾಗಿ ಮಾಡುತ್ತದೆ. ಆದುದರಿಂದ ಮದ್ಯಪಾನ ಮತ್ತು ಮಾದಕ ದ್ರವ್ಯಗಳ ಸೇವನೆಯನ್ನು ಇಂದಿನಿಂದಲೇ ಕೈಬಿಟ್ಟು ನಿಮ್ಮ ಬಾಳನ್ನು ಹಸನು ಮಾಡಿಕೊಳ್ಳಿ. ಮದ್ಯಪಾನ ಸೇವನೆಗೆ ಬಲಿ ಬಿದ್ದವರು ಈಗಲಾದರೂ ಎಚ್ಚೆತ್ತುಕೊಂಡು ವೈದ್ಯರ ಸಲಹೆ ಪಡೆದುಕೊಂಡು ಕುಡಿತದ ಸಾವಿನ ಬಲಿಯಿಂದ ದೂರವಾಗಿ.

**"ಹೆಂಡ ಸಾರಾಯಿ ಸಹವಾಸ**
**ಹೆಂಡತಿ ಮಕ್ಕಳ ಉಪವಾಸ"**

**"ಹೆಂಡದ ಹಂಬಲ ಅಡಗಲಿ**
**ಸಂಸಾರ ನೆಮ್ಮದಿ ಕಾಣಲಿ"**

**"ಕುಡಿತದಿಂದ ಸರ್ವನಾಶ"**

---

ಹೆಚ್ಚಿನ ಮಾಹಿತಿಗೆ ಈ ಕೆಳಕಂಡ ವಿಳಾಸಕ್ಕೆ ಭೇಟಿಯಾಗಿ

ಕಾರ್ಯದರ್ಶಿ
**ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ**
ವಿಶ್ವೇಶ್ವರಯ್ಯ ಕೇಂದ್ರ, 6ನೇ ಮಹಡಿ
ಡಾ. ಅಂಬೇಡ್ಕರ್ ವೀದಿ, ಬೆಂಗಳೂರು - 560 001

ದೂರವಾಣಿ : 265932